







# ಸಿದ್ಧಗಂಗಾ

ಸಂಪುಟ-29. ಅಗಸ್ಟ-1993.












ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ

**ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ**

## " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**
**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
**ಮತ್ತು**
**ಬೃಹತ್ ಪ್ರಸಾದ ನಿಲಯ.**
(16-2-92) ರಂದು

ಭಾರತದ ರಾಷ್ಟ್ರಪತಿ ಡಾ|| ಶ್ರೀ ಶಂಕರದಯಾಳ ಶರ್ಮ ಮತ್ತು ಲೋಕಸಭಾಧ್ಯಕ್ಷ ಶ್ರೀ ಶಿವರಾಜ್ ಪಾಟೀಲ್ ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/ 5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್, ಕಾರ್ಯಾಧ್ಯಕ್ಷರು,

ಪದ್ಮಭೂಷಣ ಡಾ|| ಎಂ. ಸಿ. ಮೋದಿ, ಅಧ್ಯಕ್ಷರು, ವಜ್ರಮಹೋತ್ಸವ ಸಮಿತಿ.

ಎಸ್. ಎಸ್. ಹಸಬಿ, ಕಾರ್ಯದರ್ಶಿಗಳು.

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572 104.

# ಸಿದ್ಧಗಂಗಾ

ಸಂಪುಟ-29. ಸಂಚಿಕೆ-8. ಆಗಸ್ಟ್-1993.

## ಶ್ರೀ ಸಿದ್ಧಗಂಗಾ ಗುರುಕರುಣ ಶ್ರೀವಿಧಿ.

ಮುಡದಿ ಮಕ್ಕಳು ನಿನ್ನ ಅಡಿಗಡಿಗೆ ಸ್ಮರಿಸುವರು
ಎಡೆಬಿಡದೆ ತಲೆಕಾಯಿ ನನ್ನ ತಂದೆ । ಪೊಡಮುಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ನಡೆದಾಡುವ ಶ್ರೀಗುಡಿಯೆ ನುಡಿದಾಡುವ ಶ್ರೀಲಿಂಗ
ಅಡಿಗಡಿಗೆ ತವಪಾದ ಸ್ಮರಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

×× ×× ××

ನಿನ್ನ ಕೃಪೆವಡೆದು ನಾ ಧನ್ಯನಾಗಿಹೆ ತಂದೆ
ನಿನ್ನ ಕಾರುಣ್ಯದಲಿ ಸಾಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು. ॥

⁂ + ⁂ ÷ ⁂

—ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 7 |
| * ಸಂಪಾದಕೀಯ | | 9 |
| * ಆರೋಗ್ಯಕ್ಕೆ 'ಧ್ಯಾನ' | —ಹೆಚ್. ಎಂ. ಕೋಳಿವಾಡ | 11 |
| * ಅಶಾಂತಿಯ ನಿವಾರಣೆ ಹೇಗೆ | —ಪ. ರಾಮಕೃಷ್ಣ ಶಾಸ್ತ್ರಿ | 13 |
| * ಮಾಣಿಕ್ಯ ದೀಪ್ತಿ | —ಎಸ್. ಷಡಕ್ಷರಿ | 17 |
| * ಸಿದ್ಧಗಂಗಾ ಬೆಟ್ಟದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು | —ಕೆ. ಬಿ. ಶಿವತಾರಕ್ | 19 |
| * ಸ್ವಾಗತ (ಕವನ) | —ಎಸ್. ಅನಸೂಯಮ್ಮ | 21 |
| * ರಾಜಕಾರಣ ಮತ್ತು ರಾಜಕೀಯ ಪ್ರಜ್ಞೆ | —ಬಸವರಾಜ ಸರಬದ | 23 |
| * ಅಂತರಂಗದ ಸತ್ಯಗಳು | —ಸತೀಶ್ ಕುಲಕರ್ಣಿ | 26 |
| * ಭಾನುವಾರವಿಶ್ರಮದಿನ ಏಕೆ ? | ಪೊಯಕ್ಕರ ಕೆ. ಗಣೇಶ್ | 26 |
| * ಮಾನಸಿಕ ಶಕ್ತಿಗಳು | ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ | 32 |
| * ಜೋಗುಳಗಳು – (ಲಾಲಿ) | —ಹರಿಹರ ಶ್ರೀನಿವಾಸರಾವ್ | 35 |

## ಶ್ರೀವಾಣಿ



### ಸಂಸ್ಕಾರ

ಶ್ರೀಮಠಕ್ಕೆ ಪ್ರತಿದಿನವೂ ಬರುವ ಯಾತ್ರಾರ್ಥಿಗಳು ವಿವಿಧ ಧರ್ಮದ, ವಿವಿಧ ಸಮಾಜಕ್ಕೆ ಸೇರಿದವರಿರುತ್ತಾರೆ. ಕ್ಷೇತ್ರ ದರ್ಶನಕ್ಕಾಗಿ ಬರುವವರು ಕೆಲವರಾದರೆ, ಅಧಿಕಾರಿವರ್ಗದವರು ಕೆಲವರಿರುತ್ತಾರೆ. ಸಂಸ್ಥೆಯ ಸೇವಾ ಮಣಿಹಕ್ಕೆ ಸರ್ಕಾರದಿಂದ ಯಾವ ರೂಪದಲ್ಲಿ ಸಹಾಯ ಕೊಡಿಸಬಹುದು, ಸಹಕಾರ ನೀಡಬಹುದು, ಪುರೋಭಿವೃದ್ಧಿಗೆ ನೆರವಾಗಬಹುದು ಎಂಬ ದೃಷ್ಟಿ ಧೋರಣೆಗಳುಳ್ಳವರಿರುತ್ತಾರೆ. ಅಂತೆಯೇ ಸರ್ಕಾರದಿಂದ ಪಡೆದ ನೆರವು, ನಿಧಿಗಳು ಸದ್ವಿನಿಯೋಗವಾಗುತ್ತಿದೆಯೇ ಅಥವಾ ಇಲ್ಲವೆ ಎಂಬುದನ್ನು ಪರಿಶೀಲಿಸಲು ಬರುವವರುಂಟು. ಸೇವಾ ಸಂಸ್ಥೆಗೆ ಬರುವವರೆಲ್ಲರ ರೀತಿ ನೀತಿಗಳು, ಆಲೋಚನೆ, ಆಕಾಂಕ್ಷೆಗಳು ಒಂದೇ ವಿಧದಲ್ಲಿರುವುದಿಲ್ಲ. ಹಾಗಿರಲು ಸಾಧ್ಯವೂ ಅಲ್ಲ ಹಿಂದಿನ ದಿನಗಳಲ್ಲಿ ಅಧಿಕಾರಿಗಳಲ್ಲಿದ್ದ ಮನೋಭಾವನೆ ಇತ್ತೀಚಿನದಿನಗಳಲ್ಲಿ ಕಾಣಬರುತ್ತಿಲ್ಲ. ತಮ್ಮ ಅಧಿಕಾರಾವಧಿಯಲ್ಲಿ ಸೇವಾಸಂಸ್ಥೆಗಳಿಗೆ ಕೈಲಾದ ಸಹಾಯ ಮಾಡುವಲ್ಲಿ ಸಂತೋಷ, ತೃಪ್ತಿಯನ್ನು ವ್ಯಕ್ತಪಡಿಸುತ್ತಿದ್ದ ಅಧಿಕಾರಿಗಳಿರುತ್ತಿದ್ದರು. ಈಗ ಪೂರ್ಣಇಲ್ಲವೆಂದಲ್ಲ, ಅಂಥವರ ಸಂಖ್ಯೆ ವಿರಳ. ಕೆಲವು ಅಧಿಕಾರಿಗಳಂತೂ ಧರ್ಮ ಪ್ರಜ್ಞೆಯುಳ್ಳವರಾಗಿರುತ್ತಿದ್ದರು. ಸಂಪ್ರದಾಯ, ಆಚರಣೆಗಳ ಬಗ್ಗೆ ತಿಳಿವಳಿಕೆಯುಳ್ಳವರಾಗಿರುತ್ತಿದ್ದರು

ತುಮಕೂರು ಜಿಲ್ಲೆಗೆ ಒಬ್ಬ ಜಿಲ್ಲಾಧಿಕಾರಿಗಳು ಬಂದಿದ್ದರು. ಮುಸ್ಲಿಂ ಧರ್ಮೀಯರು. ಮೃದುವಚನ, ಸದುವಿನಯಗಳು ಅವರ ನಡೆ ನುಡಿಗಳಲ್ಲಿ ಎದ್ದು ಕಾಣುತ್ತಿದ್ದವು. ದೈವ ಭಕ್ತರು, ಆಧ್ಯಾತ್ಮ ಜೀವಿಗಳು. ಒಮ್ಮೆ ಮಠಕ್ಕೆ ಬಂದಿದ್ದರು. ಅವರ ಉಪಾಹಾರಕ್ಕಾಗಿ ಬಿಸ್ಕತ್, ಕಾಫಿಗಳನ್ನು ಕೊಡಲಾಯಿತು. ಆಗ ಅವರು ಬಿಸ್ಕತ್ತನ್ನು ಮಠದಲ್ಲಿ ಅತಿಥಿಗಳಿಗೆ ಕೊಡಬೇಡಿ ಬಿಸ್ಕತ್ತಿನ ತಯಾರಿಕೆಯಲ್ಲಿ ಮಾಂಸವನ್ನು ಬಳಸುತ್ತಾರೆ ಅದು ಮಠದ ಸಂಪ್ರದಾಯಕ್ಕೆ ಅಪಚಾರವಾದಂತಾಗುತ್ತದೆ. ಅದಕ್ಕೆ ಬದಲಾಗಿ ಹಣ್ಣು ಕೊಡಿ, ಹಾಲುಕೊಡಿ, ಮಜ್ಜಿಗೆಕೊಡಿ- ಎಂದುಕೊಡಲಾಗಿದ್ದ ಬಿಸ್ಕತ್ತನ್ನು ತೆಗೆದಿಟ್ಟುಬರೀ ಕಾಫಿಯನ್ನು ಮಾತ್ರ ಸೇವಿಸಿದರು. ಆಶ್ಚರ್ಯವಾಯಿತು. ಆನಂದವೂ ಆಯಿತು. ಸಂಸ್ಕಾರದ ಫಲ ಯಾರಲ್ಲಿ, ಯಾವ ಸಂದರ್ಭದಲ್ಲಿ ಹೇಗೆ ವ್ಯಕ್ತವಾಗುತ್ತದೆ ಎಂಬುದನ್ನು ತಿಳಿಯಲಾಗದು. ಅಲ್ಲದೆ ಸಂಸ್ಕಾರವೆಂಬುದು ಯಾರೊಬ್ಬರ ಗುತ್ತಿಗೆಯೂ ಅಲ್ಲ. ಮಾನವೀಯ ಅನುಕಂಪ, ಧರ್ಮಪ್ರಜ್ಞೆಯ, ಸಂಪ್ರದಾಯ ಸದಾಚರಣೆಗಳ ಫಲ ಅದು ಅಂತರಂಗದ ಬೆಳಕು ಸಂಸ್ಕಾರ.

ಇನ್ನೊಮ್ಮೆ ಸಮಾರಂಭ ಒಂದಕ್ಕೆ ಸಚಿವರೊಬ್ಬರನ್ನು ಆಹ್ವಾನಿಸಲಾಗಿದ್ದಿತು. ಸಮಾರಂಭದ ನಂತರ ಊಟದ ವ್ಯವಸ್ಥೆ ಮಾಡಲಾಗಿತ್ತು. ಸಚಿವರು ಊಟಕ್ಕೆ ಮಠದ ಸಂಪ್ರದಾಯಕ್ಕೆ ಹೊರತಾದುದನ್ನು ಅಪೇಕ್ಷಿಸಿದರೆಂದು ಸಿಬ್ಬಂದಿಯವರು ತಿಳಿಸಿದರು. ಅವರಿಗೆ ನಯವಾಗಿಯೇ ಸಿಬ್ಬಂದಿಯವರು ಅಂಥದಕ್ಕೆಲ್ಲ ಅವಕಾಶವಿಲ್ಲ ಎಂದು ಮನವರಿಕೆ ಮಾಡಿಕೊಟ್ಟರೂ, ಸಚಿವರು ಅತೃಪ್ತಿಯನ್ನು ವ್ಯಕ್ತಪಡಿಸಿದ್ದು ಗೊತ್ತಾಯಿತು. ಸೇವಾ ಸಂಸ್ಥೆಗಳಿಗೆ ಬರುವವರ ಮನೋಧರ್ಮ, ಸಂಸ್ಕಾರಗಳು ಭಿನ್ನ!ಭಿನ್ನವಾಗಿರುತ್ತವೆ. ಶ್ರೀ ಮಠದ ಆತಿಥ್ಯದ ಹಿನ್ನೆಲೆಯಲ್ಲಿ ಧಾರ್ಮಿಕ ಪರಂಪರೆಯ ಸಂಸ್ಕಾರ ವಿದೆಯೆಂಬುದನ್ನು ಮರೆಯುವವರೂ ಇರುತ್ತಾರೆ, ಅರಿಯುವವರೂ ಇರುತ್ತಾರೆ. ಸಂಸ್ಥೆಗೆ ಆತಿಥ್ಯ ಮಾಡುವಲ್ಲಿ ಸಂಪ್ರದಾಯಾತ್ಮಕವಾಗಿ ಬಂದಿರುವ 'ಸಂಸ್ಕಾರ' ವನ್ನು ಕಾಪಾಡುವ ಜವಾಬ್ದಾರಿಯಿರುತ್ತದೆ.

## ಶ್ರೀ ಸಿದ್ಧಲಿಂಗೇಶ್ವರ ವಚನ

ಕೈಯಲ್ಲಿ ಹಣ್ಣಿದ್ದಂತೆ ಮರವನೇರಿ ಕೊಂಬ ಬಾಗಿಸಿ
ಕಾಯ ಕೊಯುವ ಅರೆಮರುಳನಂತೆ
ಅನಾದಿ ಮೂಲದೊಡೆಯ
ತನ್ನ ಕರಸ್ಥಲ ಮನಸ್ಥಲದಲಿಪ್ಪುದ ತಾನರಿಯದೆ
ಬೇರೆ ಲಿಂಗವುಂಟು, ಬೇರೆ ಕ್ಷೇತ್ರವುಂಟು ಎಂದು
ಹಲವು ಲಿಂಗಕ್ಕೆ ಹರಿದು ಹಂಬಲಿಸುವ ಈ ಸೂಳೆಗೆ ಹುಟ್ಟಿದವರಿಗೆ
ಗುರುವಿಲ್ಲದ ಲಿಂಗವಿಲ್ಲ, ಜಂಗಮವಿಲ್ಲದ ಪ್ರಸಾದವಿಲ್ಲ,
ಮುಕ್ತಿಯೆಂಬುದು ಎಂದೆಂದಿಗೂ ಇಲ್ಲ ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ !

ಯಾವನಾದರೊಬ್ಬನು ತನ್ನ ಕೈಯಲ್ಲಿ ಅತ್ಯಂತ ಪಕ್ವವಾದ ಫಲವನ್ನು ಹಿಡಿದುಕೊಂಡು ಅದನ್ನುತಿಂದು ತೃಪ್ತನಾಗದೆ, ಗಿಡವನ್ನು ಹತ್ತಿ ಅದರ ಟೊಂಗಿಯ ತುದಿಯಲ್ಲಿದ್ದ ಕಸುಗಾಯನ್ನು ಕಷ್ಟದಿಂದ ಸಂಪಾದಿಸಲು ಪ್ರಯತ್ನಿಸುತ್ತಿರುವುದನ್ನು ಕಂಡರೆ ಅವನ ಬಗೆಗೆ ತಿಳಿದವರು ಯಾವ ಅಭಿಪ್ರಾಯ ಪಡಬಹುದೆಂಬುದನ್ನು ಹೇಳುವುದೇ ಬೇಡ. ಅವನು ಅರೆಮರುಳನಾಗಿಯೇ ಇರಬೇಕು ಎಂಬುದೇ ದಿಟ. ಹಾಗೆಯೇ ತನ್ನ ಕರಸ್ಥಲದಲ್ಲಿ ಇಷ್ಟಲಿಂಗವನ್ನು. ಮನಸ್ಥಲದಲ್ಲಿ ಪ್ರಾಣಲಿಂಗವನ್ನು ಗುರುಕರುಣೆಯಿಂದ ಪಡೆದುಕೊಂಡಾಗಲೂ ಅದನ್ನರಿಯದೆ 'ಬೇರೆ ಬೇರೆ ಕ್ಷೇತ್ರಗಳಿಗೆ ಹೋಗಿ ಅಲ್ಲಿದ್ದಲಿಂಗವನ್ನು ಕಾಣಬೇಕೆಂದು ಬಯಸುವವನು ಕೂಡ ಅರೆಮರುಳನಾಗಿಯೇ ಇರಬೇಕು. ಇಂಥವನ ಭಕ್ತಿಯು ವ್ಯಭಿಚಾರಿತವಾಗಿರುವುದು. ಅಂತೆಯೇ ಅವನು ಸೂಳೆಯ ಮಗನಂತಾಗುವನು. ಅಂಥವನಿಗೆ ನಿಜಗುರು, ಲಿಂಗ, ಜಂಗಮ, ಪ್ರಸಾದ ಎಂಬವು ಇರಲಾರವು. ಅಂದಮೇಲೆ ಮುಕ್ತಿಯೆಂಬುದು ದೂರದಲ್ಲಿಯೇ ಉಳಿದುಕೊಳ್ಳುವುದು. ಇಷ್ಟಲಿಂಗದಲ್ಲಿ ತದ್ವಾರಾ ಪ್ರಾಣಲಿಂಗದಲ್ಲಿ ಅಚಲ ಭಕ್ತಿಯುಳ್ಳವನೇ. ಆತ್ಯಂತಿಕ ದುಃಖ ನಿವೃತ್ತಿಯುಳ್ಳವನು. ಎಂದರೆ ಆತ್ಯಂತಿಕ ಸುಖ ಸ್ವರೂಪವೂ ಆದ ಮುಕ್ತಿಯನ್ನು ಪಡೆಯ ಬಲ್ಲವನು ಯಾವುದನ್ನು ಪಡೆದ ಮೇಲೆ ಪುನಃ ಪಡೆಯ ಬೇಕಾದದ್ದು ಮತ್ತಾವುದೂ ಇರುವುದಿಲ್ಲವೋ ಅದೇ ನಿಜಸುಖವು; ಅದು ಅವ್ಯಭಿಚರಿತ ಭಕ್ತಿಯಿಂದಲೇ ಸಾಧ್ಯ.

[ಕೃಪೆ:- ಷಟ್‌ಸ್ಥಲ ಜ್ಞಾನ ಸಾರಾಮೃತ- ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ, ಎಡೆಯೂರು-ಗದಗ]

**ಸಿದ್ಧಗಂಗಾ ಮಾಸ ಪತ್ರಿಕೆ**

**ಶ್ರೀ ಸಿದ್ಧಗಂಗಾ ಮಠ - 572 104**

ತುಮಕೂರು ಜಿಲ್ಲೆ

**ಡಾ|| ಎಂ. ಎನ್. ಚನ್ನಬಸಪ್ಪ**

ಪ್ರಧಾನ ಕಾರ್ಯದರ್ಶಿಗಳು

ಹಳೆಯ ವಿದಾರ್ಥಿ ಸಂಘ

* * *

**ಪ್ರೊ|| ಚನ್ನಪ್ಪ ಎರೇಸೀಮೆ**

ಪ್ರಧಾನ ಸಂಪಾದಕರು

* * *

**ಹೆಚ್. ವಿ. ವೀರಭದ್ರಯ್ಯ**

ಸಂಪಾದಕರು

* * *

**ಬಿ. ವೀರಭದ್ರಯ್ಯ**

**ಪಿ. ಎನ್. ಚಂದ್ರಶೇಖರಯ್ಯ**

**ಎಂ. ರೇಣುಕಾರಾಧ್ಯ**

ಸಂಪಾದಕ ಮಂಡಳಿ

* * *

**ಹೆಚ್. ಬಿ. ಗಂಗಾಧರಯ್ಯ**

ಪ್ರಕಾಶಕರು

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

ಮುದ್ರಕರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**

ಪ್ರಕಟಣೆಯ ಸ್ಥಳ

**ಚಂದಾ ವಿವರ**

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 300-00

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**" ಸಂಪಾದಕರು "**

**'ಸಿದ್ಧಗಂಗಾ' ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ಶ್ರಾವಣ ಬಂತು. ನಾಡಿನುದ್ದಗಲದಲ್ಲಿ ಧಾರ್ಮಿಕ ಚಟುವಟಿಕೆಗಳು ಪ್ರಾರಂಭ ಗ್ರಾಮ ಜೀವನದಲ್ಲಿ ಶ್ರಾವಣಕ್ಕೆ ಒಂದು ಕಾಲದಲ್ಲಿ ಮಹತ್ವಪೂರ್ಣ ಆಯಾಮವಿತ್ತು. ದೇವಾಲಯಗಳಲ್ಲಿ, ಚಾವಣಿಗಳಲ್ಲಿ ಮಠಗಳಲ್ಲಿ, ಪುಣ್ಯಕ್ಷೇತ್ರಗಳಲ್ಲಿ ಧಾರ್ಮಿಕಾಚರಣೆಗಳು ವಿಜೃಂಭಿಸುತ್ತಿದ್ದವು. ಮಹಾಕಾವ್ಯಗಳ, ಪುರಾಣಕಾವ್ಯಗಳ, ಪ್ರವಚನಗಳು ನಡೆಯುತ್ತಿದ್ದವು. ಜನತೆ ಶ್ರವಣ ಸಂಸ್ಕಾರವನ್ನು ಶ್ರೀಮಂತಗೊಳಿಸಿಕೊಳ್ಳುತ್ತಿದ್ದರು. ಅನಕ್ಷರಸ್ಥರೂ ಸಹ ಕೇವಲ ಶ್ರವಣ ಸಂಸ್ಕಾರ ಬಲದಿಂದ ಪ್ರಾಜ್ಞತ್ವವುಳ್ಳವರಾಗಿರುತ್ತಿದ್ದರು. ಜನಾಂಗ ನಿರ್ಮಾಣದಲ್ಲಿ, ಸುಸಂಸ್ಕೃತ ಪರಿಸರ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಒಳ್ಳೆಯ ಮಾತು ಕಿವಿಯ ಮೇಲೆ ಬೀಳುತ್ತಿರುವಂತೆ ಸದಾ ತವಕಿಸುತ್ತಿದ್ದರು. 'ಭದ್ರಂಕರ್ಣೇ' ಎಂಬುದಕ್ಕಾಗಿ ಚಡಪಡಿಸುತ್ತಿದ್ದರು. ದೇವರ ಪೂಜೆಯಿಂದೇ ಪ್ರವಚನಗಳಿಗೆ ಹೋಗುತ್ತಿದ್ದರು. ಮಾಸಪರ್ಯಂತ ಮಂಗಳಮಯ ಜೀವನ ನಡೆಸುತ್ತಿದ್ದರು. ಪ್ರಕೃತಿಯೂ ಅನುಕೂಲಕರವಾಗಿ ಭಾಗಿಯಾಗುತ್ತಿತ್ತು. ಹಸಿರು ಹಬ್ಬ ಎತ್ತೆತ್ತಲೂ ಎದ್ದು ಕಾಣುತ್ತಿತ್ತು. ನೆಲಮುಗಿಲುಗಳೂ ಶ್ರಾವಣದಲ್ಲಿ ಮಳೆ ಮೂಲಕ ಒಂದನ್ನೊಂದು ಶ್ರವಣ ಸಂಸ್ಕಾರಕ್ಕೆ ತೆರೆದುಕೊಳ್ಳುತ್ತವೆ. ಆಹ್ಲಾದಕರ ವಾತಾವರಣ ಮೃಗೀಯತ್ವದಿಂದ ಮಾನವತ್ವದ ಕಡೆಗೆ ನಡೆಯುವ ಪ್ರಯತ್ನ ಹಿರಿಯರದಾಗಿತ್ತು. ಕವಿಗಳು ಶ್ರಾವಣವನ್ನು ಕುರಿತು ಹಾಡಿದ್ದುಂಟು. " ಶ್ರಾವಣಾ ಬಂತು ನಾಡಿಗೆ, ಬಂತು ಕಾಡಿಗೆ " ಎಂದು ಬೇಂದ್ರೆ ಹಾಡಿದರು. ಹಾಗೆಲ್ಲಾ ಉತ್ಸಾಹ, ಆನಂದ ಲಾಸ್ಯವಾಡುತ್ತಿದ್ದ ಸಂದರ್ಭ.

ಈಗ—

ಬಂತು ಶ್ರಾವಣ ಮಾನವ ಪ್ರಕೃತಿಯಂತೆಯೇ ಪ್ರಕೃತಿಯೂ ಏರುಪೇರು ಮಳೆಯಿಲ್ಲ, ಬಿತ್ತಿದ ಬೀಜ ಮೊಳೆಯಲಿಲ್ಲ. ಮೊಳೆತದ್ದೂ ಬೆಳೆಯಲಾರದ ನರಳಿಕೆ. ಕೆರೆ ಕಟ್ಟೆಗಳೆಲ್ಲಾ ಬರಿದು. ಬರುವ ಮಳೆ ಚೌಕಾಶಿ ವ್ಯಾಪಾರಿಯಾಗಿದೆ. ನಮ್ಮ ನಿತ್ಯ ಜೀವನವೂ ಹಿರಿದಾದುದನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿಲ್ಲ. ಹೊಟ್ಟೆ ತುಂಬಿಸಿಕೊಳ್ಳುವುದೊಂದೇ ದಂಧೆಯಾಗಿದೆ. ಸಂಸ್ಕಾರಪಡೆಯಬೇಕೆಂಬ ಮನೋಭಾವ. ಶೂನ್ಯ ಅಕ್ಷರಸ್ಥರೂ ಹೃದಯವಂತರಾಗುವ ಸಂಸ್ಕಾರ ಬಯಕೆಯುಳ್ಳವರಾಗುತ್ತಿಲ್ಲ. ದೇವಾಲಯಗಳು, ಮಂದಿರಗಳು, ಮಠಗಳು 'ಆತ್ಮಸಂಸ್ಕಾರಕೃಷಿ"ಗಿಂತಲೂ ಕೇವಲ ವ್ಯಾವಹಾರಿಕ ಚಟುವಟಿಕೆಗಳ ಕಡೆಗೇ ವಾಲಿರುವುದು ವರ್ತಮಾನದ

ದುರ್ದೈವ. ಅಪವಾದವಿಲ್ಲವೆಂದಲ್ಲ. ಆದರೆ ಕಡಿಮೆ ಭವಿಷ್ಯದ ಜನಾಂಗದನಿರ್ಮಾಣದಲ್ಲಿ ನಾವೇನು ಮಾಡಿದ್ದೇವೆ. ಮಾಡುತ್ತಿದ್ದೇವೆ. ಕೇವಲ ಬೃಹತ್ ಕೈಗಾರಿಕಾ ಸ್ಥಾವರಗಳನು ಆಣೆಕಟ್ಟುಗಳನ್ನು , ಜಲಾಶಯಗಳನ್ನು ನಿರ್ಮಿಸಿದರೆ ಸಾಕೆ ? ನೈತಿಕ ಜವಾಬ್ದಾರಿಯರಿತ ಜನಾಂಗ ನಿರ್ಮಾಣಕ್ಕಾಗಿ ಏನುಮಾಡುತ್ತಿದ್ದೇವೆ. ಧರ್ಮವನ್ನು ಸರಿಯಾದ ರೀತಿಯಲ್ಲಿ ವ್ಯಾಖ್ಯಾನಿಸುವ ಯೋಜನೆಗಳು ಬೇಡವೆ ? ಆಧ್ಯಾತ್ಮಿಕ ಪ್ರಜ್ಞೆಯುಳ್ಳ ಜನಾಂಗ ನಿರ್ಮಾಣಕ್ಕಾಗಿ ಯಾವುದಾದರೂ ಯೋಜನೆ ರೂಪಿತವಾಯಿತೆ. ಸಂಸ್ಕೃತಿ ಇಂದು ಎಂಥ ಅಧಃ ಪತನಕ್ಕಿಳಿದಿದೆ. 'ಬಾಂಬ್' ಸಂಸ್ಕೃತಿಗೆ ಬಂದು ಮುಟ್ಟಿದ್ದರೂ ಜಾಗೃತಿ ಬೇಡವೆ. ನಮ್ಮ ಹಿರಿಯರ 'ದೂರ ದೃಷ್ಟಿಯಿಂದ' ಹೇಗೆ ವಂಚಿತರಾಗಿದ್ದೇವೆ. 'ಮಸೀದಿ-ಮಂದಿರಗಳ' ಕಚ್ಚಾಟದಲ್ಲಿ 'ಮಾನವ' ನನ್ನು ಹುಡುಕುವ ಸ್ಥಿತಿಗೆ ಇಳಿದಿದ್ದೇವೆ. ಇದೆಲ್ಲಾ ಹೇಗಾಯಿತು ? ಚಿಂತನೆ ಬೇಡವೆ. ಪೂರ್ವಿಕರ ಜೀವನದೃಷ್ಟಿ, ಜೀವನ ಶ್ರದ್ಧೆ ನಮಗೆ ಬೇಡವಾಯಿತೆ. ಶ್ರಾವಣದ ಮುಖೇನ ಹಿಂದಿನವರ "ಅನ್ಯರಿಗೆ ಅಸಹ್ಯ ಪಡಬೇಡ" ಎಂಬ ಸಂಸ್ಕಾರವನ್ನು ರೂಢಿಸಿಕೊಂಡು " ನೆಮ್ಮದಿ " ಯನ್ನು ಕಾಣೋಣ.

" ಒಳ್ಳೆ ತಿಳಿವದು ಬರಲಿ ಎಲ್ಲ ದಿಕ್ಕಿನಲೆಮಗೆ "

---

ಬನಮುಂ ಪಟ್ಟಣಮಪ್ಪುದು । ಜನರೆಲ್ಲರ್ ಸಜ್ಜನರಪ್ಪರೀ ನೆಲನೆಲ್ಲಂ ॥
ಧನ ಕನಕ ವಸ್ತುಪೂರಿತ । ಮೆನಿಪುದಣಂ ಪೂರ್ವಪುಣ್ಯವುಳ್ಳಂಗನಿಶಂ ॥
ಕರಮೆಸೆಗುಂ ದಾನದೆ, ಕಿವಿ । ಮೆರೆಗುಂ ಶೃತದಿಂದೆ, ಕಟಕಕುಂಡಲಗಳಿನೇಂ ॥
ಕರುಣಾಳುಗಳೊಡಲೆಸಗುಂ । ಪರಹಿತದಿಂ, ಚಂದನಾನುಲೇಪನದಿಂದೇಂ ॥
ವಿದ್ಯೆಯೇ ಸಿರಿರೂಪು, ವಿದ್ಯೆಯೆ ನಿಗೂಢ ಸುರಕ್ಷಿತವಾದ ವಿತ್ತಮುಂ ॥
ವಿದ್ಯೆಯೆ ಕೀರ್ತಿಭೋಗಕರ ವಿದ್ಯೆಯೆ ದೇಶಿಕರ್ಗೆಲ್ಲ ದೇಶಿಕಂ ॥
ವಿದ್ಯೆಯೆ ಬಂಧುವಪ್ಪುದು ವಿದೇಶದೆ, ವಿದ್ಯೆಯೆ ರಾಜಪೂಜ್ಯಮುಂ ॥
ವಿದ್ಯೆಯದಿಲ್ಲದಿರ್ಪ ಮನುಜಂ ಬಗೆಯಲ್ಪಶುವಲ್ತೆ ಧಾತ್ರಿಯೊಳ್ ॥

(ಬಸವಪ್ಪ ಶಾಸ್ತ್ರಿಗಳ ಕನ್ನಡ ಭರ್ತೃಹರಿ ಸುಭಾಷಿತ)



# ಆರೋಗ್ಯಕ್ಕೆ " ಧ್ಯಾನ "

ಹೆಚ್. ಎಂ. ಕೋಳಿವಾಡ, ಕಲ್ಯಾಣನಗರ, 6ನೇ ಕ್ರಾಸ್, ಧಾರವಾಡ,

(ಕಳೆದ ಸಂಚಿಕೆಯಿಂದ)

ಇನ್ನೊಂದು ವಿಧಾನ ಯೋಗಿ ರಾಮ ಚರಕರು ಹೇಳಿದ್ದು. ಈ ವಿಧಾನದಲ್ಲಿ ಕೂಡ ಮೇಲೆ ಹೇಳಿದಂತೆ ಆಸೀನರಾಗಿರಿ. ಕೆಲ ಸಮಯದವರೆಗೆ ಪ್ರಾಣಾಯಾಮ ಮಾಡಿರಿ. ಪ್ರಾಣಾಯಾಮ ಮಾಡುವಾಗ ನಿಮಗೆ ಯಾವುದೇ ರೀತಿಯ ಕಷ್ಟವಾಗ ಕೂಡದು. ಸಹಜವಾಗಿ ಸಾಧ್ಯವಾದಷ್ಟು ಧೀರ್ಘವಾಗಿ ಉಸಿರು ಎಳೆದು ಕೊಂಡು ಅಷ್ಟೇ ದೀರ್ಘವಾಗಿ ಉಸಿರನ್ನು ಹೊರಗೆ ಬಿಡಿ. ಉಸಿರನ್ನು ಒಳಗೆ ಎಳೆದುಕೊಳ್ಳುವ ಸಮಯ ಮತ್ತು ಹೊರಗೆ ಬಿಡುವ ಸಮಯ ಸಮಸಮ ಆಗಿರಲಿ. ಬೇಕಾದರೆ ಉಸಿರು ಒಳಗೆ ತೆಗೆದುಕೊಳ್ಳುವಾಗ ಒಂದು ಎರಡು ಎಂದು ಸಂಖ್ಯೆ ಎಣಿಸಿರಿ. ಅಷ್ಟೇ ಸಂಖ್ಯೆ ಎಣಿಸುತ್ತ ಉಸಿರು ಹೊರಗೆ ಬಿಡಿರಿ. ಈ ಕ್ರಿಯೆ ಸುಲಭವಾಗಿ ನಡೆಯಲಿ. ಕಷ್ಟಮಾಡಿಕೊಳ್ಳಬೇಡಿರಿ. ಹೀಗೆ ಕೆಲ ಸಮಯ ಪ್ರಾಣಾಯಾಮ ಮಾಡಿದ ನಂತರ ಸಾಮಾನ್ಯವಾದ ಉಸಿರಾಟಕ್ಕೆ ಮರಳಿರಿ. ಕಂಣುಮುಚ್ಚಿಗೊಂಡು ಮನೋಪಟಲದ ಮೇಲೆ ಆಕಾಶವನ್ನು ಮೂಡಿಸಿಕೊಳ್ಳಿರಿ. ಈ ಆಕಾಶದ ವಿಶಾಲತೆಯನ್ನು ನೋಡಿರಿ. ಸೃಷ್ಟಿಯ ಸಮಸ್ತ ಜಡವಸ್ತುವನ್ನು ಆಕಾಶ ಆವರಿಸಿದೆ. ನೀವು ಸೃಷ್ಟಿಯ ಸಮಸ್ತ ಜಡ ವಸ್ತುವಿನೊಂದಿಗೆ ಬೆರೆತು, ಲೀನವಾಗುವಿರೆಂದು ಭಾವಿಸಿ ಅದನ್ನು ಅನುಭವಿಸಿರಿ. ನಿಮ್ಮನ್ನು ನಿಮ್ಮ ಮನಸ್ಸು ಆವರಿಸಿದಂತೆ ಒಂದು ವಿಶಾಲ ಮನಸ್ಸು ಬ್ರಹ್ಮಾಂಡವನ್ನೆಲ್ಲ ಆವರಿಸಿದೆ. ಈ ವಿಶ್ವವ್ಯಾಪಿ ಮನಸ್ಸಿನೊಂದಿಗೆ ನಿಮ್ಮ ಮನಸ್ಸು ಬೆರೆತು ಲೀನವಾಗುವದನ್ನು ಬಯಸಿರಿ ಅದನ್ನು ಅನುಭವಿಸಿರಿ. ಕೊನೆಯದಾಗಿ ವಿಶ್ವವ್ಯಾಪಿ ಶಕ್ತಿಯೊಂದಿಗೆ ಬೆರೆಯಲು ಬಯಸಿರಿ, ಈ ಐಕ್ಯವನ್ನು ಅನುಭವಿಸಿರಿ, ಸಾಗರದಲ್ಲೇಳುವ ತರಂಗ ಮತ್ತೆ ಸಾಗರದಲ್ಲಿ ಲೀನವಾಗುವಂತೆ ನೀವು ವಿಶ್ವಶಕ್ತಿಯೊಂದಿಗೆ ಲೀನವಾಗಿರಿ, ಐಕ್ಯವಾಗಿರಿ, ಈ ಐಕ್ಯವನ್ನು ಅನಭವಿಸಿರಿ, ನೀವೀಗ ಅಖಂಡವಾಗಿದ್ದೀರಿ ಅದ್ವೈತರಾಗಿದ್ದೀರಿ.

ಖಂಡದಲ್ಲಿ ಅಖಂಡವಿದೆ, ನೀವು ಖಂಡವೂ ಹೌದು. ಅಖಂಡವೂ ಹೌದು ಎಂಬುದು ಮರೆಯದಿರಿ. ಈ ಅನುಭವವನ್ನು ನೀವು ಒಂದೇ ದಿನಕ್ಕೆ ಪಡೆಯಲಾರಿರಿ ಇದಕ್ಕೆ ಸತತವಾದ ಸಾಧನೆಯ ಅವಶ್ಯಕತೆ ಮಾತ್ರವಿದೆ. ಒಂಟಿಕಾಲಲ್ಲಿ ನಿಲ್ಲುವದು, ತಲೆಕೆಳಗಾಗಿ ನಿಲ್ಲುವದು, ಮುಳ್ಳು ಹಾಸಿಗೆ ಮೇಲೆ ಮಲಗುವದು ಮುಂತಾದ ದೇಹ ದಂಡನೆಯ ಆವಶ್ಯಕತೆ ಇಲ್ಲ. ಮನೋನಿಗ್ರಹಕ್ಕಾಗಿ, ಏಕಾಗ್ರತೆಗಾಗಿ ಕಷ್ಟಪಡುವ ಅಥವಾ ಒದ್ದಾಡುವ ಅವಶ್ಯಕತೆಯೂ ಇಲ್ಲ. ಧ್ಯಾನ ಎಂಬುದು ಒಂದು ಮಾನಸಿಕ ಪ್ರತಿಕ್ರಿಯೆ. ಅದು ತನ್ನನ್ನು ತಾನೇ ಅನುಸರಿಸುವದು ಎಂದು ಮೇಲೆ ಹೇಳಿಲ್ಲವೇ!

ನೀವು ಧ್ಯಾನ ಮಗ್ನತೆಯನ್ನು ಸತತಾಭ್ಯಾಸದಿಂದ ಪಡೆದಾಗ ನಿಮ್ಮ ಮನಸ್ಸು ಪೂರ್ವಾಗ್ರಹ ಮತ್ತು ಪೂರ್ವಾಕ್ರಮಣಗಳನ್ನೆಲ್ಲ ಕಳೆದು ಕೊಂಡು ಸತ್ಯಕ್ಕೆ ಸಮೀ

ವಾಗುತ್ತದೆ. ಶರೀರ ತನ್ನ ಜಡತೆಯನ್ನು ನೀಗಿಸಿಕೊಂಡು ಆಳವಾದ ಶಿಥಿಲತೆಯನ್ನು ಪಡೆಯುತ್ತದೆ. ಆಗ ಶರೀರ ಮತ್ತು ಮನಸ್ಸು ಎರಡೂ ಪುನಃರುಜ್ಜೀವಿತವಾಗುತ್ತವೆ ನಿರ್ಲಿಪ್ತತೆ ಮೂಡುತ್ತದೆ. ಅರಿವು (Intution) ಬೆಳೆಯುತ್ತದೆ.

ಧ್ಯಾನ ಮಗ್ನರಾದಾಗ ನಮ್ಮ ಉಸಿರಾಟ ಮಂದಗಾಗುತ್ತದೆ. ಹೃದಯದಗತಿ ಕೂಡ ತಗ್ಗುತ್ತದೆ, ನಾವು ಸೇವಿಸುವ ಆಕ್ಸಿಜನ್‌ದ ಪ್ರಮಾಣ ಕಡಿಮೆ ಆಗುತ್ತದೆ, ತ್ವಚೆಯ ವಾಹಕತ್ವ ತಗ್ಗುತ್ತದೆ. ಸ್ನಾಯುಗಳು ತಮ್ಮ ಕಠಿಣತೆಯನ್ನು (Tension ಕಳೆದುಕೊಂಡು ಶಿಥಿಲವಾಗುತ್ತವೆ. ಸಂಪೂರ್ಣ ಶರೀರ ಶಿಥಿಲಗೊಂಡು (relax) ಮೈಮನಸ್ಸು ಎರಡೂ ಹೂವಿನಂತೆ ಹಗುರಾಗುತ್ತವೆ, ಇವೆಲ್ಲ ವೈಜ್ಞಾನಿಕ ಪರೀಕ್ಷೆಗಳಿಂದ ಖಚೀತ ಪಡಿಸಿದ ಪರಿಣಾಮಗಳು, ಈ ಕಾರಣಗಳಿಂದ ಸೈಕೋಸೊಮೆಟಿಕ್ ಮತ್ತು ಒತ್ತಡದ (stress) ಮೂಲದ ರೋಗಗಳಾದ ರಕ್ತಒತ್ತಡ, ಸಕ್ಕರೆ ರೋಗ ಶ್ವಾಸ ರೋಗ, ಮೈಗ್ರೈನ ತಲೆನೋವು, ನಿದ್ರಾಹೀನತೆ, ಜಠರದ ರೋಗ ಮುಂತಾದವುಗಳನ್ನು ತಡೆಯುವ (Prevent)ದಲ್ಲದೆ ಈ ರೋಗಗಳ ಉಪಚಾರದಲ್ಲೂ ಬಹಳ ಮಹತ್ವದ ಭೂಮಿಕೆ ತಾಳುತ್ತದೆ. ಈ ರೋಗಗಳು ಕ್ರಮೇಣವಾಗಿ ನೀಗುತ್ತವೆ.

ಧ್ಯಾನದ ಪ್ರಭಾವವನ್ನು ಅರಿತುಕೊಳ್ಳಲು ನ್ಯೂರೋವೆಜಿಯೊಲೊಜಿಕಲ ವಿಜ್ಞಾನಿಗಳ ಇತ್ತೀಚೆಗಿನ ಸಂಶೋಧನೆಗಳು, ಬಹಳ ಸಹಾಯ ಮಾಡಿವೆ. ಅಧಿಕಾಂಶ ಜನರಲ್ಲಿ ಎಡಭಾಗದ ಅರ್ಧ ಮೆದುಳು ಬಲಭಾಗದ ಅರ್ಧಕ್ಕಿಂತ ಹೆಚ್ಚು ಪ್ರಭಾವಶಾಲಿ (dominant) ಆಗಿರುವುದಲ್ಲದೆ ಬಲಾರ್ಧದ ಮೇಲೆ ಆಧಿಪತ್ಯ (dominates) ಹೇರುತ್ತದೆ. ವಾಮಾರ್ಧಭಾಗವು ನಮ್ಮ ತಾರ್ಕಿಕ ವಿಚಾರಗಳನ್ನು ಗಣಿತದ ಕಲ್ಪನೆಗಳನ್ನು ಮತ್ತು ನಮ್ಮ ಮಾತನಾಡುವ ಶಕ್ತಿ ಮುಂತಾದವುಗಳನ್ನು ಪೋಷಿಸುತ್ತದೆ. ಬಲಭಾಗದ ಅರ್ಧ ಮೆದುಳು ಕಲಾತ್ಮಕ ಭಾವನೆಗಳನ್ನು ತರ್ಕಶಾಸ್ತ್ರದ ಆಚೆಗಿನ ವಿಚಾರಗಳನ್ನು ಅರಿವಿನ (intuition) ಗ್ರಹಣಶಕ್ತಿಯನ್ನು ಪೋಷಿಸುತ್ತದೆ. ಈ ಪ್ರಭಾವದ ವಲಯ ಧ್ಯಾನದಿಂದ ಎಡಭಾಗಕ್ಕಿಂತ ಬಲಭಾಗದತ್ತ ಹೆಚ್ಚು ವಾಲುತ್ತ ಹೋಗುತ್ತದೆ. ಆದುದರಿಂದ ನಮ್ಮ ಮನೋಗ್ರಾಹ್ಯ ಶಕ್ತಿ ವಿಕಾಸಗೊಂಡ ಅರಿವಿನ ಶಕ್ತಿ ತೀಕ್ಷ್ಣವಾಗುತ್ತದೆ. ದೇಹದ ಸಂಪೂರ್ಣ ಶಿಥಿಲತೆಯಿಂದಾಗಿ (Deep relaxation)ಮಾಡುವ ಪರಿಣಾಮಗಳು ಅತ್ಯಂತ ಲಾಭಕರವಾಗಿದೆ. ಗೊಂದಲಮಯ ನಿತ್ಯಜೀವನದಲ್ಲಿಯ ಅಶಾಂತಿಯನ್ನು ಕಳೆದುಕೊಂಡು ಮನಸ್ಸು ಪ್ರಶಾಂತವಾಗುತ್ತದೆ. ಬುದ್ಧಿ ತೀಕ್ಷ್ಣವಾಗುತ್ತದೆ, ಸಂವೇದನೆ ಹೆಚ್ಚುತ್ತದೆ. ಅರಿವು ವೃದ್ಧಿಗೊಳ್ಳುತ್ತದೆ. ಏಕಾಗ್ರತೆ ಕರಗತವಾಗುವುದಲ್ಲದೆ ನಿಮ್ಮ ಕಾರ್ಯಕೌಶಲ್ಯವೂ ಬೆಳೆಯುತ್ತದೆ. ಮಾನಸಿಕ ಒತ್ತಡದಿಂದುಂಟಾಗುವ ತೊಂದರೆಗಳು ನೀಗುತ್ತವೆ ನಕಾರಾತ್ಮಕ ವಿಚಾರಗಳು ದೂರವಾಗುತ್ತವೆ. ಜೀವನದ ಬಗೆಗೆ ಪ್ರೇಮ ಉದಯಿಸುತ್ತದೆ. ನಿಮ್ಮ ಆತ್ಮ ವಿಶ್ವಾಸ ಬೆಳೆಯುತ್ತದೆ. ಸತ್ಯಕ್ಕೆ ನೀವು ಸಮೀಪರಾಗುತ್ತೀರಿ ನಿಮ್ಮ ಅರಿವು, ಆನಂದ ಬೆಳೆಯುತ್ತದೆ. ನಿಮ್ಮ ವ್ಯಕ್ತಿತ್ವದ ವಿಕಾಸವಾಗುತ್ತದೆ. ಈ ಎಲ್ಲ ಲಾಭಗಳನ್ನು ಸ್ಥಿರವಾಗಿ ಬಳಸಿಕೊಳ್ಳುವುದು, ಬೆಳೆಸಿಕೊಳ್ಳುವುದು ನಿಮ್ಮ ಕೈಯಲ್ಲಿದೆ.



# ಅಶಾಂತಿಯ ನಿವಾರಣೆ ಹೇಗೆ ?

—ಪ. ರಾಮಕೃಷ್ಣಶಾಸ್ತ್ರಿ, ಶಿವಶಕ್ತಿನಿಲಯ, ಮಚ್ಚಿನ, ದ. ಕ - 574295

ಈ ಪ್ರಪಂಚ ಯಾಕೆ ಇಂತಹ ಕ್ಷೋಭೆಗೊಳಗಾಗಿದೆ ? ಎಲ್ಲಿ ನೋಡಿದರೂ ಅರಾಜಕ ಪರಿಸ್ಥಿತಿಯೇ ಮೆರೆಯುತ್ತಿದೆಯಲ್ಲ ? ಶಾಂತಿ ಎಂಬುದು ಹುಡುಕಿದರೆ ಸಿಗದ ವಿರಳ ವಸ್ತುವಾಗಿದೆ. ಇದು ಮಹಾ ವಿದ್ವಾಂಸರಿಗೆ ಆಗರವಾದ, ವಿಶ್ವಪ್ರಖ್ಯಾತ ವಿದ್ಯಾನಿಲಯಗಳ ಬೀಡಾದ ದೇಶವಾದರೂ ಇಲ್ಲೂ ಹೀಗೇಕೆ ?

ಅಜ್ಞಾನ, ಅಹಂಕಾರಗಳನ್ನು ಜ್ಞಾನ ಎಂಬ ಯಜ್ಞವೇದಿಕೆಗೆ ಸಮರ್ಪಿಸಿ ಧರ್ಮವನ್ನು ಪ್ರತಿಷ್ಠಾಪನೆಗೊಳಿಸು ಎಂದು ಋಗ್ವೇದ ಸಾರಿತು. ಆದರೆ ಪ್ರಾಪಂಚಿಕರಲ್ಲಿ ಈ ಎರಡೂ ಅವಗುಣಗಳು ಎದ್ದು ಕಾಣುತ್ತಾ ಇವೆ. ನಮ್ಮ ದೇಶದಲ್ಲಿ ಅಧ್ಯಾತ್ಮಿಕ ಸಂಪತ್ತಿನ ಭಂಡಾರವೇ ಇದ್ದರೂ ಅದರ ಸದ್ಬಳಕೆ ನಡೆಯುತ್ತಿಲ್ಲ. ಬರೇ ಪುಸ್ತಕಗಳ ಅವಲಂಬನೆಯಿಂದ ಜ್ಞಾನ ವೃದ್ಧಿಯಾಗುತ್ತದೆ ಎಂದು ತಿಳಿಯುವುದೇ ಒಂದು ಅಜ್ಞಾನ. ವಿದ್ ಎಂದರೆ ಪ್ರಕಾಶ ಅರ್ಥಾತ್ ತೇಜಸ್ಸು. ಇದನ್ನು ಕೊಡುವಂಥ ಶಕ್ತಿಗೇ ವಿದ್ಯೆ ಎನ್ನುತ್ತೇವೆ. ಇಂದು ಕಲಿಯುವ ವಿದ್ಯೆ ತೇಜಸ್ಸಿನ ಅಭಿವೃದ್ಧಿಗೆ ಪೂರಕ ಅಲ್ಲ. ಪರಿಪೂರ್ಣ ಜ್ಞಾನ ಲಭ್ಯವಾಗದಿರುವುದೇ ಅಜ್ಞಾನ, ಅಹಂಕಾರಗಳಿಗೆ ಮೂಲವಾಗಿದೆ.

ಪುರಾಣ ಕಾಲದಲ್ಲಿ ಶುಕಮುನಿಯು ಒಂದು ಸಲ ಶಿಷ್ಯರಿಗೆ ಆಧ್ಯಾತ್ಮ ಬೋಧನೆ ಮಾಡುವ ಕಾರ್ಯಕ್ರಮ ವಿರಿಸಿಕೊಂಡ. ಅದನ್ನು ಆಲಿಸಲು ಅಲ್ಲಿಗೆ ಮಿಥಿಲೆಯ ದೊರೆ ಜನಕ ಕೂಡ ಬರಲಿದ್ದಾನೆಂದು ತಿಳಿಯಿತು. ಮುನಿಯು ಬಹು ಹೊತ್ತು ದೊರೆಗಾಗಿ ಕಾದು ಕುಳಿತ. ಆಗ ಇತರ ಜನರು " ಈ ಮುನಿಯೂ ಕೂಡ ದೊರೆಯ ಮನ ಮೆಚ್ಚಿಸಲು ಕಾತುರನಾಗಿದ್ದಾನೆ. ಇಲ್ಲವಾದರೆ ಉಪನ್ಯಾಸವನ್ನು ಕೇಳಲು ನಾವೆಲ್ಲ ಸೇರಿರುವಾಗ ಅದನ್ನು ಆರಂಭಿಸುವ ಬದಲು ಅವನನ್ನೇ ಯಾಕೆ ಕಾದು ಕುಳಿತಿರುತ್ತಾನೆ ? ಇವನಿಗೇಕೆ ಇಂಥ ಭೇದ ಭಾವ ? " ಗೊಣಗಿದರು.

ಬಹು ಹೊತ್ತಿನ ಮೇಲೆ ಜನಕ ಆಗಮಿಸಿ, ಮುನಿಯ ಉಪನ್ಯಾಸವನ್ನು ಆಲಿಸಲಾರಂಭಿಸಿದ. ಅದರಲ್ಲೇ ಮುಳುಗಿ ಹೋದ. ಆಗ ಯಾರೋ ಬಂದು, " ಮಿಥಿಲಾ ನಗರಕ್ಕೆ ಬೆಂಕಿ ಬಿದ್ದು ಧಗಧಗನೆ ಉರಿಯುತ್ತಿದೆ. ಅರಮನೆಯೂ ಬೆಂಕಿಯ ಜ್ವಾಲೆಗೆ ಸಿಲುಕಿದೆ " ಎಂದರು. ಅದನ್ನು ಕೇಳಿ ಉಪನ್ಯಾಸ ಕೇಳುತ್ತಿದ್ದವರೆಲ್ಲರೂ ತಮ್ಮ, ಬಂಧುಗಳ ಆಸ್ತಿ ಪಾಸ್ತಿಗಳ ನೆನಪಾಗಿ ಓಡಿ ಹೋದರು. ಜನಕನಿಗೆ ಮಾತ್ರ ಕರೆದರೂ

ಮೈಯಲ್ಲಿ ಎಚ್ಚರ ವಿಲ್ಲ. ಆತ ಬೋಧನೆಯಲ್ಲಿ ತಲ್ಲೀನನಾಗಿದ್ದಾನೆ. ಈ ಪ್ರಪಂಚದ ಪರಿವೆಯನ್ನೇ ಮರೆತು ಬಿಟ್ಟಿದ್ದಾನೆ.

ಆ ಹೊತ್ತಿಗೆ ಬೆಂಕಿಯ ಸುದ್ದಿ ಬರೀ ಸುಳ್ಳು ಎಂದು ತಿಳಿದು ಹೋದವರೆಲ್ಲ ಮರಳಿ ಬಂದರು. ಶುಕಮುನಿ ಅವರೊಂದಿಗೆ ಹೇಳಿದ, "ನಾನು ಜನಕನನ್ನು ಕಾದು ಕುಳಿತುದಕ್ಕಾಗಿ ನೀವು ಬೇಸರಿಸಿದರಲ್ಲವೇ ? ನನಗೆ ಆತ ದೊಡ್ಡವ, ನೀವು ಸಣ್ಣವ ರೆಂಬ ಭೇದ ಇಲ್ಲ. ನೀವು ಕೇಳುತ್ತೀರಿ ಆದರೆ ಅದನ್ನು ಆಚರಣೆಗೆ ತರದೆ ಪ್ರಾಪಂಚಿಕ ಮೋಹ, ಅಭಿಮಾನ, ಅಹಂಕಾರಗಳಿಗಾಗಿ ನಿಮ್ಮ ಕಿವಿಗಳು ತೆರೆದಿರುತ್ತವೆ. ಆದರೆ ಜನಕ ಪೂರ್ಣವಾಗಿ ಬೋಧನೆಯಲ್ಲಿ ತಲ್ಲೀನನಾಗಿ ಸರ್ವಾರ್ಪಣ ಭಾವದಿಂದ ಸ್ವೀಕ-ರಿಸುತ್ತಾನೆ."

ಇಂದಿನ ವಿದ್ಯಾಭ್ಯಾಸಂಗ ಮಟ್ಟವೂ ಇದೇ ಆಗಿದೆ. ವಿದ್ಯೆಯಲ್ಲಿ ತನಗೆ ಬೇಕಾದಷ್ಟನ್ನು ಮಾತ್ರ ಸ್ವೀಕರಿಸುವ ಪ್ರವೃತ್ತಿಯಿಂದಾಗಿ ತನ್ನಲ್ಲಿರುವ ಕೆಟ್ಟ ಗುಣ ಗಳನ್ನು ತ್ಯಾಜ್ಯಗೊಳಿಸುವಂಥ ಶಕ್ತಿಯನ್ನು ವಿದ್ಯಾರ್ಥಿಗಳು ಗಳಿಸಿಕೊಳ್ಳುವುದಿಲ್ಲ. ಈಶ್ವರನ ಕೃಪೆಗೆ ಪಾತ್ರರಾಗಲು ಆಗತ್ಯವಾದದ್ದು ತಾಳ್ಮೆಯಿಂದೊಡಗೂಡಿದ ಅಂತ ರಂಗ ಶುದ್ಧಿ. ಅದರಿಂದ ಸ್ಫುರಿಸಿದ ಪ್ರೇಮ, ಕ್ಷಮೆ, ಸಮಾಧಾನ, ಶ್ರದ್ಧೆಗಳೆಂಬ ಪ್ರಾಮುಖ್ಯ ಗುಣಗಳು ಮಾನವ ಎನಿಸಲು ಯೋಗ್ಯ.

ಭಗವದ್ಗೀತೆಯು ಮನುಷ್ಯನಿಗೆ ಸರ್ವಸಂಗ ಪರಿತ್ಯಾಗವನ್ನು ಬೋಧಿಸುವುದು ಇಲ್ಲ. ಅದು ತನ್ನಡತೆಯ ಆಳತೆಗೋಲು ಕೂಡ ಅಲ್ಲ. ಅರ್ಜುನನಿಗೆ ಕೃಷ್ಣ ಹೇಳು-ತ್ತಾನೆ, " ನೀನು ಸುದೀರ್ಘ ಕಾಲ ಬದುಕಿ ಯಾವ ಕೆಲಸ ಮಾಡಿದರೂ ಅದರಲ್ಲಿ ಹೆಚ್ಚುಗಾರಿಕೆ ಇಲ್ಲ. ಅಭಿಮಾನ, ಮಮಕಾರ, ಬಂಧುಗಳಲ್ಲಿ ವ್ಯಾಮೋಹ ಇವೆಲ್ಲವೂ ಕ್ಷಣಿಕವಾಗಿ, ಕಾಲ ಪ್ರವಾಹದಲ್ಲಿ ತೇಲಿಕೊಂಡು ಹೋಗುವಂಥವುಗಳು. ಇವುಗಳಿ ಗಾಗಿ ನೀನು ಜೀವನ ತತ್ವವನ್ನು ಮರೆತು, ರಾಗದ್ವೇಷಗಳಿಗೆ ಬಲಿಯಾಗಿ, ಇಂದ್ರಿಯ ಗಳನ್ನು ನಿಗ್ರಹಿಸದೆ ಮನಸ್ಸಿಗೆ ಮಾಲಿನ್ಯವನ್ನು ತಂದು ಕೊಂಡಿದ್ದೀಯಾದರೆ ಈ ಅಜ್ಞಾನವು ಅಧಃ ಪತನ ಗೊಳಿಸುತ್ತದೆ. ಇವೆಲ್ಲವುಗಳನ್ನು ಮರೆತು ಪರಮಾತ್ಮನಿಗೆ ಶರಣಾದರೆ ಶಾಶ್ವತವಾದ ಆನಂದವು ನಿನಗೆ ಲಭಿಸುತ್ತದೆ "

ಬಾಹ್ಯ ಸೌಂದರ್ಯವು ಪರಮಾತ್ಮನನ್ನು ಮೆಚ್ಚಿಸುವ ಸಾಧನವಲ್ಲ. ಹೂವಿನಲ್ಲಿ ರುವ ಸುಗಂಧ ಮಾತ್ರ ಹೇಗೆ ದೇವರಿಗೆ ಪ್ರಿಯವೋ ನಮ್ಮಲ್ಲಿರುವ ಹೃದಯಃ ಪರಿ ಶುದ್ಧತೆ ಮಾತ್ರ ಅವನಿಗೆ ಪ್ರಿಯವಾದುದು. ಸೇವಕನಾಗಿ ಸೇವೆ ಸಲ್ಲಿಸುವ ಬಗೆಯನ್ನು ಅರಿಯದ ವ್ಯಕ್ತಿ ಪಾಲಕನಾಗಿ ಆಳಲು ಅರ್ಹನಲ್ಲ. ನಮ್ಮ ಬದುಕನ್ನು ಸೇವಾ ಕಾಂಕ್ಷೆಯಿಂದ ನಡೆಸಿ ಅನುಭವ ಪಡೆದಾಗ ದೇಶವನ್ನು ಕಾಡುವ ಅನೇಕ ಸಮಸ್ಯೆ



ಗಳನ್ನು ಬಿಡಿಸಲು ಸಾಧ್ಯ. ಬಹುತೇಕ ಸಮಸ್ಯೆಗಳಿಗೆ ಮೂಲ ಹಸಿವು. ಇದು ಆಸೆಯ ಇನ್ನೊಂದು ರೂಪ. ಆಸೆಯನ್ನು ಗೆಲ್ಲಲು ಅದನ್ನು ಪಡೆಯಲು ಶತಪ್ರಯತ್ನ ಮಾಡುವುದೊಂದೇ ಮಾರ್ಗ ಅಲ್ಲ. ಆಸೆಯನ್ನು ಮೆಟ್ಟಿ ನಿಂತಾಗ ವಿಶಾಲ ಮನೋ-ಭಾವನೆ ಬಲಿಯುತ್ತದೆ. ಅದೇ ಶಾಂತಿಗೆ ಮೂಲಾಧಾರ.

ಭಾವಾವೇಶವು ಬಲಹೀನತೆಗೆ ಕಾರಣ. ಆದರಿಂದ ನಷ್ಟ, ಕಷ್ಟ, ದುಃಖಗಳು ಪ್ರಾಪ್ತವಾಗುತ್ತವೆ. ಭಕ್ತಿ, ಧೈರ್ಯ, ಸ್ಥೈರ್ಯಗಳಿಂದ ಇದನ್ನು ನಾವು ಗೆಲ್ಲಬಹುದು. ಭಾವಾವೇಶವನ್ನು ಗೆಲ್ಲಲಾಗದಿದ್ದರೆ ರಾಗದ್ವೇಷಗಳು ಅನಾಹುತಕ್ಕೆ ಎಡೆ ಮಾಡಿ ಕೊಡುತ್ತವೆ. ಆಗ ಎಷ್ಟು ವಿದ್ಯೆ ಕಲಿತಿದ್ದರೂ ಅರೆಕ್ಷಣದಲ್ಲಿ ಅದು ಪ್ರಯೋ-ಜನವಿಲ್ಲ ಎಂಬಲ್ಲಿಗೆ ಬರುತ್ತದೆ. ಕಲಿತ ವಿದ್ಯೆಯು ವಿವೇಕವನ್ನು ಜಾಗೃತಗೊಳಿಸು ವಂತಿರಬೇಕು. ಆದರಿಂದ ಕರುಣೆ, ದಯೆ, ಪರೋಪಕಾರ ಭಾವನೆಗಳು ತಾನಾಗಿ ಸ್ಫುರಿಸುತ್ತವೆ. ಹೀಗಾದಾಗ ವ್ಯಕ್ತಿ ಬದಲಾವಣೆ ಹೊಂದುತ್ತಾನೆ.

ಇಂಥ ಸದ್ಗುಣಗಳನ್ನು ಪ್ರೇರೆಪಿಸುವ ವಿದ್ಯಾಭ್ಯಾಸ ಕ್ರಮವು ಇಂದು ನಮ್ಮ ಲ್ಲಿರದೆ ಎಲ್ಲರ ದೃಷ್ಟಿಯೂ ಶಾಶ್ವತವಾದ ಕುರ್ಚಿ ಸಿಗಲು ಯಾವ ವಿದ್ಯೆ ಅನುಕೂಲ ಎಂಬುದರಲ್ಲೇ ನೆಟ್ಟಿದೆ. ಆದರಿಂದಾಗಿ ಅತೃಪ್ತಿಯುಂಟಾಗುತ್ತದೆ. ಅದು ಅಶಾಂತಿಗೆ ಮೂಲವಾಗುತ್ತದೆ. ಅಶಾಂತಿಯಿಂದ ಎದ್ದ ಬೆಂಕಿ ವೈಷಮ್ಯ, ಹಿಂಸಾಚಾರಗಳಿಗೆ ಎಡೆಯಾಗುತ್ತದೆ.

ಈ ಪರಿಸ್ಥಿತಿಯನ್ನು ನೀಗಲು ಆಧ್ಯಾತ್ಮಿಕ ಸಾಧನೆಯತ್ತ ನಾವು ಒಲಿಯುವು-ದರಿಂದ ನಾವೂ ಮಾರ್ಪಾಡು ಹೊಂದುತ್ತೇವೆ. ಸುತ್ತಲಿನ ಸಮಾಜದ ಕ್ಷೋಭೆಯನ್ನು ನೀಗಿಸುವ ಶಕ್ತಿ ನಮಗೆ ಬರುತ್ತದೆ.

# ಮಾಣಿಕ್ಯ ದೀಪ್ತಿ

....ವಿದ್ವಾನ್ ಎಸ್; ಷಡಕ್ಷರಿ ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜ್, ಶ್ರೀ ಸಿದ್ದಗಂಗಾಮಠ.

ಶಾಲಾ ಕಾಲೇಜುಗಳು ಆರಂಭ ಅಥವಾ ಮುಕ್ತಾಯ ವಾಗುತ್ತಿದ್ದಂತೆಯೆ ವಿದ್ಯಾರ್ಥಿ ಸಂಘಗಳ ಮೂಲಕ, ಸಮಾರಂಭ ಸಂತೋಷ ಕೂಟಗಳು ನಡೆಯುವುದು ಒಂದು ಪದ್ಧತಿ. ನಾನು ಇಂಥಹ ಒಂದು ಸಮಾರಂಭಕ್ಕೆ ಆಹ್ವಾನಿತನಾಗಿ ಭಾಗ ವಹಿಸಿದ್ದೆ. ಕಾರ್ಯಕ್ರಮದ ಮಧ್ಯೆ ವಿದ್ಯಾರ್ಥಿಗಳಿಂದ ಮನರಂಜನೆ ಇದ್ದಿತು. ಆಗ ಸಭಾಜನರ ಹಿಂಭಾಗದಲ್ಲಿ ಕೆಲವು ಪಡ್ಡೆ ಹುಡುಗರು ಕುರ್ಚಿಗಳ ಮೇಲೆ ಕುರ್ಚಿ ಜೋಡಿಸಿ ಅವುಗಳ ಮೇಲೆ ನಿಂತು ಮನರಂಜನೆಯನ್ನು ನೋಡುತ್ತಾ, ಕೇಕೆ ಹಾಕುವುದು, ಚಪ್ಪಾಳೆ ತಟ್ಟುವುದು, ಶಿಳ್ಳೆ ಹೊಡೆಯುವುದು, ಇತ್ಯಾದಿ ಕುಚೋದ್ಯಗಳಲ್ಲಿ ತೊಡಗಿದ್ದರು. ವಿಪರೀತ ಗದ್ದಲ. ಸ್ವಲ್ಪ ಹೊತ್ತಿನ ನಂತರ ಕುರ್ಚಿಯ ಮೇಲೆ ಎತ್ತರವಾಗಿ ನಿಂತಿದ್ದ ಹುಡುಗರು ಒಬ್ಬರ ಮೇಲೊಬ್ಬರು ಕೆಳಗೆ ಬಿದ್ದರು. ಒಬ್ಬನ ಕಾಲಿಗೆ ಜಖಂ ಆಯಿತು. ಸುದ್ದಿ ತಿಳಿದ ಕೂಡಲೇ ಎಲ್ಲರ ಗಮನ ಅತ್ತ ಸರಿಯಿತು. ಸಭ್ಯತೆ, ಸಭಾ ಮರ್ಯಾದೆ ಕುಂಠಿತವಾಯಿತು. ಇದೆಲ್ಲವನ್ನು ಗಮನಿಸಿ ಕಾರಣವನ್ನು ಕುರಿತು ಚಿಂತನೆ ಮಾಡಿದಾಗ ನನಗೆ ಹೀಗನ್ನಿಸಿತು,

ಕಾರ್ಯಕ್ರಮದಲ್ಲಿ ಅರ್ಥವಾಗದ ಅಶ್ಲೀಲ ಸಿನಿಮಾ ಹಾಡುಗಳು, ಜೊತೆಗೆ ನಮ್ಮ ಸಂಸ್ಕೃತಿಯನ್ನೂ ವಂಚಿಸುವಂತ ಪಾಶ್ಚಾತ್ಯ ಮಾದರಿಯ ಬ್ರೇಕ್‌ಡ್ಯಾನ್ಸ್ ಮತ್ತು ಹುಡುಗಿಯರು ತನ್ನ ಆರು ವರ್ಷದ ಅವಧಿಯಲ್ಲಿ ಧರಿಸ ಬೇಕಿದ್ದ ಮಾದರಿಯ ಉಡುಪನ್ನು ಹದಿನಾರನೆಯ ವಯಸ್ಸಿನಲ್ಲಿ ಧರಿಸಿ ನರ್ತನ ಮಾಡುತ್ತಿದ್ದುದು ಮುಖ್ಯ ಕಾರಣವಾಗಿತ್ತು.

ಅಂದ ಮಾತ್ರಕ್ಕೆ ಈ ರೀತಿಯ ಸಂಗೀತ-ನೃತ್ಯಗಳು ಬೇಡವೆ. ಬೇಡವೆಂದು ಅಭಿಪ್ರಾಯವಲ್ಲ. ಅದಕ್ಕೆ ಭರತಖಂಡದಲ್ಲಿ ಹಿರಿಯ ಸ್ಥಾನವಿದೆ. ಅದರ ಪ್ರವರ್ತಕ ಸಾಕ್ಷಾತ್ ಪರಮೇಶ್ವರ, ಆಚಾರ್ಯಭರತ ಮುನಿ ಆದ ಮಾತ್ರದಿಂದಲೇ ಅದನ್ನು ಎಲ್ಲೆಲ್ಲಿಯೂ ತರುವುದಕ್ಕಾಗುತ್ತದೆಯೇ ? ಅದಕ್ಕೂ ಮಿತಿ ಬೇಡವೇ ಇವೆಲ್ಲವೂ ಸಂಗೀತ ಶಾಲೆಯಲ್ಲಿ, ನಾಟಕ ಮಂದಿರದಲ್ಲಿ ಸಿನಿಮಾಗಳಲ್ಲಿ ಬೇಕಾದರೆ ಇಟ್ಟುಕೊಳ್ಳಲಿ ಇವುಗಳ ಸ್ಥಾನವೆ ಅವಲ್ಲವೆ ? ಸಾಹಿತ್ಯ ಮಂದಿರದಲ್ಲಿ ಸಾಹಿತ್ಯವೆ ಹಸು, ಸಂಗೀತಾದಿಗಳು ಅದರ ಬಾಲ, ಹಸು ಬಾಲವನ್ನು ಅಲ್ಲಾಡಿಸಬೇಕೆ ಹೊರತು, ಬಾಲ ಹಸುವನ್ನು ಅಲ್ಲಾಡಿಸ ಬಾರದಲ್ಲವೆ ? ಶಾಲಾ ಮಂದಿರಗಳಲ್ಲಿ ಈ ತೆರನಾದ ನೃತ್ಯಾದಿಗಳು ಅನುಚಿತವೆನಿಸುತ್ತದೆ. ಕೆಲವು ಬುದ್ಧಿ ಜೀವಿಗಳು ಇವಿಲ್ಲದಿದ್ದರೆ ಶಾಲಾ ಕಾರ್ಯಕ್ರಮಕ್ಕೆ ಜನ ಬರುವುದಿಲ್ಲ ಎಂದು ಕಾರಣ ಕೊಡಬಹುದು. ಸಮರ್ಥನೆ ಮಾಡಬಹುದು ಸಕ್ಕರೆ ಸಿಹಿಯಾಗಿರುತ್ತದೆ ಎಂದು ಅದನ್ನು ಅಡಿಗೆಗೆಲ್ಲ ಬೊಗಸೆ ಬೊಗಸೆ ತೆಗೆದು ಹೊಯ್ಯಬಹುದೆ ? ವಿಲಾಸವೂ ವಿದ್ವತ್ತೂ ಸ್ವಲ್ಪ ದೂರ ದೂರದಲ್ಲಿರುವುದು ಒಳ್ಳೆಯದೆಂದು

ತೋರುತ್ತದೆ.

ಸ್ಕೂಲಿಗೆ ಹೋಗದಿರುವ ಹುಡುಗರಿಗೆ ಎಷ್ಟು ದಿನ ಚಾಕ್‌ಲೇಟ್ ಪೆಪ್ಪರ್‌ಮೆಂಟ್ ಆಸೆ ತೋರಿಸಿ ಸ್ಕೂಲಿಗೆ ಕಳುಹಿಸಬಹುದು ಪೆಪ್ಪರ್‌ಮೆಂಟ್ ಮುಗಿದ ತಕ್ಷಣವೇ ಮನೆಗೆ ಹಿಂತಿರುಗಿ ಬಂದು ಬಿಟ್ಟರೆ ನಮ್ಮ ಉಪಾಯ ಉದ್ದೇಶಗಳೇನಾದವು ? ಹಾಲು ಬೇಕೆನ್ನುವವರು ಹಸುವನ್ನು ಹಿಡಿಯಬೇಕು ಬಾಲವನ್ನಲ್ಲ.

ಬೋಧಕರು, ಪೋಷಕರು, ಸಂಸ್ಥಾಪಕರು ವಿದ್ಯಾರ್ಥಿಗಳ ಶಿಸ್ತು ಸಂಯಮ ಸಂಸ್ಕೃತಿ, ಸಭ್ಯತೆ ಮುಗಿಲಾಗಿ ಪ್ರತಿಭೆಯನ್ನು ರೂಪಿಸುವ ರೂವಾರಿಗಳಾಗಬೇಕು. ವಿದ್ಯಾರ್ಥಿಯೆಂದರೆ ವಿದ್ಯೆಯನ್ನು ಬೇಡುವ ಅಥವಾ ಆರ್ಜಿಸುವ ತಪಸ್ವಿಗಳಿಗೆ ಶಾಲೆಗಳು ಶಿಸ್ತು.ಸಭ್ಯತೆಯ ತಪೋಮಂದಿರಗಳಾಗಬೇಕು. ಹಾಗಲ್ಲದೆ ಅನರ್ಥ ಕಾರಿ ಸಿನಿಮಾ ಹಾಡು, ನರ್ತನಗಳಿಗೆ ವಿದ್ಯಾಮಂದಿರಗಳು ಪ್ರೋತ್ಸಾಹಿಸುವ ತಾಣಗಳಾದರೆ ? ಕೊಳೆತ ಹಣ್ಣನ್ನು ಅಂಗಡಿಯಲ್ಲಿಯೇ ಕೊಂಡು ತಿಂದು ರೋಗ ಗ್ರಸ್ತರಾದಂತೆ ವಿದ್ಯಾರ್ಥಿಗಳ ಸ್ಥಿತಿಯೂ ಆದೀತು. ಆದಕ್ಕಾಗಿಯೇ "ನಾಸ್ತಿ ವಿದ್ಯಾ ಸಮಂಚಕ್ಷುಃ" ವಿದ್ಯಾಮಂದಿರಗಳು ವಿದ್ಯಾರ್ಥಿಗಳ ಕಣ್ಣಾಗಬೇಕೆ ವಿನಃ ಹುಣ್ಣಾಗಬಾರದು

ವಿದ್ಯಾನಾಮ ನರಸ್ಯ ರೂಪಮಧಿಕಂ, ಪ್ರಚ್ಛನ್ನಗುಪ್ತಂ ಧನಂ
ವಿದ್ಯಾ ಭೋಗಕರೀ ಯಶಃ ಸುಖಕರೀ ವಿದ್ಯಾಗುರೂಣಾಂ ಗುರುಃ ।
ವಿದ್ಯಾಬಂಧುಜನೋ ವಿದೇಶಗಮನೇ ವಿದ್ಯಾ ಪರಾದೇವತಂ
ವಿದ್ಯಾರಂಜಸು ಪೂಜ್ಯತೇ ನಹಿಧನಂ ವಿದ್ಯಾವಿಹೀನ;ಪಶು; ॥

ಅಂದ ಮೇಲೆ ಈ ಬಗ್ಗೆ ವಿದ್ಯಾರ್ಥಿ ಪ್ರಪಂಚವೂ ಕೂಡ ಎಚ್ಚೆತ್ತುಕೊಳ್ಳಬೇಕಾದುದು ಅನಿವಾರ್ಯವಲ್ಲವೆ ?



# ಸಿದ್ಧಗಂಗಾ ಬೆಟ್ಟದಲ್ಲಿ ಪ್ರಾಗೈತಿಹಾಸಿಕ ಅವಶೇಷಗಳು.


— ಕೆ. ಬಿ. ಶಿವತಾರಕ್ ಉಪನ್ಯಾಸಕ: ಪ್ರಾಚೀನ ಭಾರತದ ಇತಿಹಾಸ ಮತ್ತು ಪುರಾತತ್ವ.
ಸೈಂಟ್ ಮೇರಿಸ್ ಸಿರಿಯನ್ ಕಾಲೇಜು, ಬ್ರಹ್ಮಾವರ-576213.


ತುಮಕೂರು ಜಿಲ್ಲೆಯು ಪ್ರಾಗೈತಿಹಾಸಿಕ ನೆಲೆಗಳ ತವರೂರಾಗಿದೆ. ಕಿಬ್ಬನಹಳ್ಳಿ (ತಿಪಟೂರು ತಾಲ್ಲೂಕು) ಹಳೆಯ ಮತ್ತು ಸೂಕ್ಷ್ಮ ಶಿಲಾಯುಗದ ಅವಶೇಷಗಳನ್ನು ನೀಡಿದರೆ ವೈ.ಎನ್. ಹೊಸಕೋಟೆ ಮತ್ತು ನಿಡುಗಲ್ಲು (ಪಾವಗಡ ತಾ॥) ಗಳು ನೂತನ ಶಿಲಾಯುಗದ ಮತ್ತು ಬೃಹತ್ ಶಿಲಾಯುಗದ ಅವಶೇಷಗಳನ್ನು ನೀಡಿದೆ. ಹೀಗೆ ಜಿಲ್ಲೆಯ ಮೂಲೆ ಮೂಲೆಯಲ್ಲೂ ಇಂತಹ ಅವಶೇಷಗಳು ದೊರಕುತ್ತಿದ್ದು ಪ್ರಾಗೈತಿಹಾಸದ ಮಾನವನ ಇರುವಿಕೆಗೆ ಆಯಕಟ್ಟಿನ ಸ್ಥಳವಾಗಿದ್ದಿತ್ತೆಂಬುದು ಸ್ಪಷ್ಟವಾಗುತ್ತದೆ.

ಸಿದ್ಧಗಂಗಾ ಬೆಟ್ಟದಲ್ಲೂ ಇಂತಹ ಅವಶೇಷಗಳು ದೊರಕಿದ್ದು ಇವು ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗಕ್ಕೆ ಸೇರಿದವುಗಳಾಗಿವೆ.

ಸಿದ್ಧಗಂಗಾ ಕ್ಷೇತ್ರದ ಪೂರ್ವಕ್ಕೆ ಬೆಟ್ಟದ ತಪ್ಪಲಿನಲ್ಲಿ ಸೂಕ್ಷ್ಮ ಶಿಲಾಯುಗ (ಕ್ರಿ.ಪೂ. 10,000–8,000)ದ ಅವಶೇಷಗಳು ದೊರೆತಿದ್ದು ಈ ಆಯುಧಗಳನ್ನು ತಯಾರಿಸುವಾಗ ಕಲ್ಲಿನ ಚಕ್ಕೆಯನ್ನು ತೆಗೆದು ವಿವಿಧ ರೀತಿಯ ಆಯುಧಗಳನ್ನು ಬೆಣಚು ಕಲ್ಲಿನಲ್ಲಿ ತಯಾರಿಸಲಾಗಿದೆ.

ಸೂಕ್ಷ್ಮ ಶಿಲಾಯುಗದ ಕಾಲದಲ್ಲಿ ವಾಯುಗುಣದಲ್ಲಿ ಬದಲಾವಣೆಯಾಗಿ, ಉಷ್ಣಾಂಶ ಹೆಚ್ಚಾಗಿ ದೊಡ್ಡ ಕಾಡುಗಳು ಹೋಗಿ ಹುಲ್ಲುಗಾವಲುಗಳು ಮತ್ತು ಸರೋವರಗಳಾದವು. ಮಾನವನು ವೇಗವಾಗಿ ಓಡುವ ಹಲವು ಪ್ರಾಣಿಗಳನ್ನೂ ಜಲಚರಪ್ರಾಣಿಗಳನ್ನೂ ಬೇಟೆಯಾಡಲು ಪ್ರಯತ್ನಿಸಿದನು. ಇದಕ್ಕಾಗಿ ಸಣ್ಣದಾದ ಕಲ್ಲಿನ ಆಯುಧಗಳು ಬೇಕಾದ್ದರಿಂದ ಸೂಕ್ಷ್ಮಶಿಲಾಯುಧಗಳನ್ನು ತಯಾರಿಸಿದನು. ಇಂತಹ ಆಯುಧಗಳು ಒಂದರಿಂದ ನಾಲ್ಕು ಸೆಂ.ಮೀ ಉದ್ದವಿದ್ದು ಹರಿತವಾದ ಬಾಯನ್ನು ಹೊಂದಿ ನೀಳವಾಗಿರುತ್ತವೆ. ಇವುಗಳನ್ನು ಮರದ ಕೋಲಿಗಾಗಲಿ, ಮರವನ್ನು ಕುಡುಗೋಲಿನಾಕೃತಿಯಲ್ಲಿ ಮಾಡಿ, ಒಳಭಾಗ ಕೊರೆದು ಈ ಸೂಕ್ಷ್ಮ ಶಿಲಾಯುಧಗಳನ್ನು ಸಿಕ್ಕಿಸಿ ಮರದ ಅಂಟಿನಿಂದ ಅವುಗಳು ಗಟ್ಟಿಯಾಗಿ ನಿಲ್ಲುವಂತೆ ಮಾಡುತ್ತಿದ್ದರು. ಈ ಕಾಲದ ಪ್ರಮುಖ ಆಯುಧಗಳೆಂದರೆ ಬರೆಯುವ ಆಯುಧ

ಗಳು, ಕೂರಲಗು ಫಲಕಗಳು, ಅರ್ಧ ಚಂದ್ರಾಕೃತಿಯ ಆಯುಧಗಳು, ಕೊರೆಯುವ ಆಯುಧಗಳು, ಬಾಣದ ಮೊನೆಗಳು ಪ್ರಮುಖವಾದವುಗಳು.

ಸಿದ್ಧಗಂಗಾ ಬೆಟ್ಟದ ಹಿಂಭಾಗದಲ್ಲಿ ನೂತನ ಶಿಲಾಯುಗ (ಕ್ರಿ.ಪೂ. 1800-800)ದ ಮಡಕೆ ಚೂರುಗಳು ದೊರಕಿದ್ದು ಇವು ಕೈನಲ್ಲಿ ತಯಾರಿಸದವುಗಳಾಗಿವೆ. ನೂತನ ಶಿಲಾಯುಗವು ಮಾನವನ ಮಡಕೆ ತಯಾರಿಕೆಯ ಪ್ರಥಮ ಹಂತ.

ನೂತನ ಶಿಲಾಯುಗದ ಮುಖ್ಯ ಲಕ್ಷಣವೆಂದರೆ, ನಯಗೊಳಿಸಿದ ಕಲ್ಲಿನಾಯುಧಗಳ ಬಳಕೆ, ಮಣ್ಪಾತ್ರೆಗಳ ತಯಾರಿಕೆ, ವ್ಯವಸಾಯ ಪದ್ಧತಿ. ಪಶುಪಾಲನೆ, ಮತ್ತು ನೆಲೆಯಾಗಿ ನಿಂತ ಜೀವನ. ಇವರು ತಮ್ಮ ಆಯುಧಗಳನ್ನು ಉಜ್ಜಿ ನುಣುಪಾಗಿ ಮಾಡುತ್ತಿದ್ದರು. ಈ ಪದ್ಧತಿಯು ಯುಗದ ವೈಶಿಷ್ಟ್ಯ. ಆದುದರಿಂದಲೇ ಈ ಯುಗವನ್ನು "ನೂತನ ಶಿಲಾಯುಗ" ವೆನ್ನುತ್ತಾರೆ. ಈ ರೀತಿಯ ಕಲ್ಲಿನ ಪ್ರಮುಖ ಆಯುಧಗಳೆಂದರೆ ಕೊಡಲಿ, ಬಾಚಿ, ಉಳಿ, ಕುಳ, ಬೆಣೆ, ಉಂಗುರಕಲ್ಲು, ಕವಣೆಕಲ್ಲು, ಸತ್ತಿಗೆಕಲ್ಲು ಇತರೆ.

ಈ ಕಾಲದ ಪ್ರಾರಂಭದ ಹಂತದಲ್ಲಿ ಮಡಕೆಯನ್ನು ಕೈನಲ್ಲಿ ತಯಾರಿಸುತ್ತಿದ್ದರು. ನಂತರ ತಿಗರಿ ಅಥವಾ ಚಕ್ರದಲ್ಲಿ ಮಾಡುತ್ತಿದ್ದನೆಂಬುದು ತಿಳಿಯುತ್ತದೆ. ಇಂತಹ ಮಡಕೆಗಳು ಕೆಂಪು ಮತ್ತು ಕಂದು ಬಣ್ಣದವುಗಳಾಗಿವೆ. ಇಂತಹ ಮಡಕೆಗಳನ್ನು ಸುಡುವ ಮುನ್ನ ನಯಗೊಳಿಸುತ್ತಿದ್ದರು. ಇಂತಹ ಮಡಕೆಗಳನ್ನು "ನಯಗೊಳಿಸಿದ ಬೂದು ಬಣ್ಣದ ಮಣ್ಪಾತ್ರೆಗಳೆಂದು ಕರೆದಿದ್ದಾರೆ. ಈ ಮಡಕೆಗಳ ಆಕಾರದಲ್ಲೂ ಸಾಕಷ್ಟು ವೈವಿಧ್ಯತೆ ಏರ್ಪಟ್ಟಿದ್ದಿತು.

ಬೃಹತ್ ಶಿಲಾಯುಗದ ಜನರು ಗೋರಿಗಳನ್ನು ನಿರ್ಮಿಸುವುದರಲ್ಲಿ ಪರಿಣತರಾಗಿದ್ದರು. ಇವರ ಕಾಲದಲ್ಲಿ ಹೊಳಪುಳ್ಳ ಕೆಂಪು, ಕಪ್ಪು ಮತ್ತು ಕೆಂಪು-ಕಪ್ಪು ಮಡಕೆಗಳು ಸಿದ್ಧಗಂಗಾ ಬೆಟ್ಟದ ತಪ್ಪಲಿನಲ್ಲೂ ದೊರೆತಿದ್ದು ಈ ಸಂಸ್ಕೃತಿಯ ಜನರಿಗೂ ಈ ಸ್ಥಳ ಪ್ರಶಸ್ತವಾದ ಸ್ಥಳವಾಗಿದ್ದಿತೆಂದು ತಿಳಿಯುತ್ತದೆ.

ಒಟ್ಟಿನಲ್ಲಿ ಸಿದ್ಧಗಂಗಾ ಬೆಟ್ಟದ ಸಾಲು ಆದಿಮಾನವನ ಕಾಲದುದ್ದಕ್ಕೂ ಜನನಿಬಿಡ ಸ್ಥಳವಾಗಿದ್ದಿತೆಂದು ತಿಳಿಯುತ್ತದೆ. ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಕ್ಷೇತ್ರಕಾರ್ಯದ ಅವಶ್ಯವಿದೆ.

---

"ಆಸೆಯೇ ದಾಸಕಾಣಿರೋ, ನಿರಾಸೆಯೇ ಈಶಕಾಣಿರಣ್ಣಾ
"ಆಸೆಯನಳಿದ ರೋಷವ ನಿಲಿಸಿ, ಜಗದ ಪಾಶವನರಿದು.
ಈಶ್ವರನೆನಿಸಿಕೊಂಬ ಶರಣರ, ಜಗದ



# ಸ್ವಾಗತ

—ಎಸ್. ಅನಸೂಯಮ್ಮ, ಅಧ್ಯಾಪಕರು, ಕನ್ನಡ ವಿಭಾಗ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು.

ಜಂಗಮ ರೂಪಿ ಹಿಮಗಿರಿಯೆ
ಸಂಗಮನಾಕಾರ ಸ್ಥಿತಪ್ರಜ್ಞರೇ
ತ್ರಿವಿಧದಾಸೋಹಿ ತ್ರಿಗುಣಾತ್ಮಕರೆ
ತಮಗೆ ಸ್ವಾಗತ ಸುಸ್ವಾಗತ
'ಮೈತ್ರಿ' ಯ ಮುನ್ನೂರು ಮಾನಿನಿ
ಯರೊಂದುಗೂಡಿ ಬಯಸುವೆವೈ
ಹೃತ್ಪೂರ್ಣ ಸ್ವಾಗತ ಸುಸ್ವಾಗತ
ಮನುಜನಾಗಿ ಮೂಡಿ ಮಾನವ್ಯದ ಮೇರುವಾಗಿ
ಮಹಾಪ್ರಭುವಾದೆಯ್ಯೆ ದೀನ ಅನಾಥರಿಗಾದಾರವಾಹೆ
ನೀವು ನಿಂತ ನೆಲ ಪಾವನ ನೀವಿರುವ ಕ್ಷೇತ್ರ ಕಲ್ಯಾಣ
ಹರಿವ ನೀರೆಲ್ಲಾ ಜ್ಞಾನಗಂಗೆಯಾಗಿ ಹರಿಸುತಿಹೆ
ಸಿದ್ಧಗಂಗೆಯಲ್ಲಿ ಸಿದ್ಧಲಿಂಗನಾಶ್ರಯದಲ್ಲಿ
ಜಾತಿ ಲಿಂಗ ಭೇದವಿಲ್ಲದ ಮಹಮನೆಯ ದಾಸೋಹಿ
ಜಗದಗಲ ಮುಗಿಲಗಲ
ಮನುಕುಲದ ಮಂಗಳದ ಹರಿಕಾರ
ಅಂಧಕಾರದ ಅಜ್ಞಾನಕೆ ಜ್ಯೋತಿಯ ಶ್ರೀಕಾರವೆ
ಓಂಕಾರ, ನಾದ ಸ್ವರೂಪವೆ
ಎಂಭತ್ತೈದರ ಹರೆಯದ ಸಿದ್ಧಗಂಗೆಯ ಸಿರಿಯೆ
ಶ್ರೀ ಶ್ರೀ ಶಿವಕುಮಾರಸ್ವಾಮಿ ಗುರುವೆ
ಶರಣು ಶರಣು ಶರಣು ಶರಣು

('ಮೈತ್ರಿ" ಸಂಘದ ನಾಲ್ಕನೆ ವಾರ್ಷಿಕೋತ್ಸವ ಸಂದರ್ಭದಲ್ಲಿ ಬರೆದು ಪ್ರಸ್ತುತಪಡಿಸಿದ ಸ್ವಾಗತ ಕವನ, 9-1-93).

# ರಾಜಕಾರಣ ಮತ್ತು ರಾಜಕೀಯ ಪ್ರಜ್ಞೆ

ಡಾ|| ಬಸವರಾಜ ಸಬರದ, ರೀಡರ್, ಕನ್ನಡ ಅಧ್ಯಯನ ಸಂಸ್ಥೆ, ಗು. ವಿ. ವಿದ್ಯಾಲಯ, ಗುಲ್ಬರ್ಗಾ

ಒಂದು ನಾಡಿನ ಆರ್ಥಿಕ ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಗಳ ಬೆಳವಣಿಗೆ ಆ ನಾಡಿನ ರಾಜಕೀಯ ಕ್ಷೇತ್ರದ ಮೇಲೆ ಅವಲಂಬಿತವಾಗಿರುತ್ತದೆ. ಇಂದು ಮನುಷ್ಯನ ಇಡೀ ಬದುಕನ್ನು ರಾಜಕೀಯ ಕೇಂದ್ರೀಕರಿಸಿವೆ. ಸಾಮಾಜಿಕ ಸಾಂಸ್ಕೃತಿಕ ಬದುಕನ್ನು ತಿಳಿದುಕೊಳ್ಳಲು ಆರ್ಥಿಕ ಬದಲಾವಣೆಯನ್ನು ತರಲು ರಾಜಕೀಯ ಕ್ಷೇತ್ರ ತೀರಾ ಮುಖ್ಯವಾದುದು. ಒಳ್ಳೆಯ ರಾಜಕಾರಣ ಮಾಡಬೇಕಾಗಿದ್ದ ರಾಜಕಾರಣಿಗಳಿಗೆ ನಿಜವಾದ ರಾಜಕೀಯ ಪ್ರಜ್ಞೆ ಇರದೇ ಇದ್ದುದಕ್ಕಾಗಿ ಮೌಲ್ಯಗಳು ಅಧಃಪತನವಾಗತೊಡಗಿವೆ. ಜನತೆಗೆ ಮಾರ್ಗದರ್ಶನ ಮಾಡಬೇಕಾಗಿದ್ದ ಮುಂದಾಳುಗಳು ಸ್ವಾರ್ಥದ ಬೆನ್ನುಹತ್ತಿರುವದರಿಂದ ರಾಜಕೀಯದಿಂದ ದೂರ ಉಳಿಯಲು ಉಳಿದವರಿಗೆ ಉಪದೇಶಿಸತೊಡಗಿದ್ದಾರೆ. ರಾಜಕೀಯ ಕ್ಷೇತ್ರದಿಂದ ದೂರ ಇರುವುದು ಎಂದರೆ ಬದುಕಿನಿಂದಲೇ ದೂರವಿದ್ದಂತೆ. ಉಳಿದವರನ್ನು ಬದುಕಗೊಡಬಾರದೆನ್ನುವ ಅಧಿಕಾರ ದಾಹವುಳ್ಳವರು ಆ ರೀತಿ ಹೇಳುತ್ತಿರುತ್ತಾರೆ.

ರಾಜಕೀಯದಲ್ಲಿ ಎಡಪಂಥೀಯ, ಬಲಪಂಥೀಯ ಎಂದು ಎರಡು ಭಾಗ. ಮಾನವನ ಬದುಕಿಗೆ ಅತ್ಯುಪಯುಕ್ತವಾಗಿರುವ ಇಂತಹ ರಾಜಕೀಯ ತಿಳುವಳಿಕೆಯೇ ರಾಜಕೀಯ ಪ್ರಜ್ಞೆಯಾಗುತ್ತದೆ. ಆದ್ದರಿಂದ ದೇಶದ ಪ್ರತಿಯೊಬ್ಬ ನಾಗರಿಕನಿಗೂ ರಾಜಕೀಯ ಪ್ರಜ್ಞೆ ತೀರಾ ಅಗತ್ಯವಾಗಿದೆ.

ನಮ್ಮ ದೇಶದ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳನ್ನೇ ಉದಾಹರಣೆಗೆ ತೆಗೆದುಕೊಂಡರೆ ಈ ಮಾತು ಇನ್ನೂ ಸ್ಪಷ್ಟವಾಗುತ್ತದೆ. ರಾಮಾಯಣದ ರಾಮ ಅಯೋಧ್ಯೆಯ ಅರಸ. ಆದರೆ ಆತನೊಬ್ಬ ಶ್ರೇಷ್ಠ ಧರ್ಮಪರಿಪಾಲಕನೇ ಹೊರತು ರಾಜಕೀಯ ಮುತ್ಸದ್ದಿಯಲ್ಲ. ರಾಜಕೀಯದಿಂದ ತುಂಬಾ ದೂರವಿದ್ದ ರಾಮ ಬದುಕಿನುದ್ದಕ್ಕೂ ವನವಾಸವನ್ನೇ ಅನುಭವಿಸಿದ. ಅದೇ ಮಹಾಭಾರತದ ಕೃಷ್ಣ ಯಾವ ಅರಸೊತ್ತಿಗೆಯನ್ನು ಹೊಂದಿರದ, ಗೋವಳಿಗರ ಮನೆತನದಲ್ಲಿ ಹುಟ್ಟಿದ ಒಬ್ಬ ಸಾಮಾನ್ಯ ಮನುಷ್ಯ. ಆದರೆ ಆತ ತನ್ನ ರಾಜಕೀಯ ಚಾಣಾಕ್ಷತನದಿಂದ ದೇವರೆಂದು ಹೊಗಳಿಸಿಕೊಂಡು ಭಾರತದ ಕತೆಯಲ್ಲಿ ಹಸಿರಾಗಿ ಉಳಿದ. ಅರಸನಾಗಿಯೂ ರಾಜಕೀಯ ಚಾಣಾಕ್ಷತನವಿಲ್ಲದ ರಾಮ ಬದುಕಿನುದ್ದಕ್ಕೂ ತೊಂದರೆ ಪಟ್ಟರೆ, ಅರಸನಾಗದಿದ್ದರೂ ತನ್ನ ರಾಜಕೀಯ ಚಾಣಾಕ್ಷತನದಿಂದ ಅನೇಕ ಅರಸರನ್ನು ಮಣ್ಣು ಮುಕ್ಕಿಸಿದಾತ ಶ್ರೀಕೃಷ್ಣ, ಇಬ್ಬರೂ ಧಾರ್ಮಿಕ ಪುರುಷರು. ಇಬ್ಬರೂ ದಶಾವತಾರಗಳ ಸಾಲಿನಲ್ಲಿ ಸೇರುವವರು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ರಾಜಕೀಯ ಪ್ರಜ್ಞೆ ಚಾಣಾಕ್ಷತನ ಇರುವಂತವರಿಗೆ ಅಧಿಕಾರ-ಅಂತಸ್ತು-ಗದ್ದುಗೆಗಳು ತಲೆಬಾಗುತ್ತವೆ. ರಾಜಕೀಯ ಪ್ರಜ್ಞೆಯಿಲ್ಲದವರು ಕೈಯಲ್ಲಿ ಎಂತಹ ಅಧಿಕಾರವಿದ್ದರೂ ಅದು ಅವರಿಗೆ ಮುಳ್ಳಾಗುತ್ತದೆ.

ಎಲ್ಲರಿಗೂ ಕೇಡು ಬಗೆದು ತನ್ನ ಸ್ವಾರ್ಥಸಾಧಿಸಿಕೊಳ್ಳುವುದು ಅಧಮ ರಾಜಕೀಯ. ಒಬ್ಬರಿಗೆ ಕೇಡು ಬಗೆದು ಮತ್ತೊಬ್ಬರಿಗೆ ಒಳ್ಳೆಯದು ಮಾಡುವುದು ಉತ್ತಮ ರಾಜಕೀಯ. ನಮ್ಮ ದೇಶದಲ್ಲಿ ಉತ್ತಮ ರಾಜಕೀಯದ ಪರಿಚಯವಾದದ್ದು ಮಹಾತ್ಮ ಗಾಂಧಿಯವರ ಮುಖಾಂತರ. ಸತ್ಯ-ಅಹಿಂಸೆ-ಪ್ರೀತಿಗಳ ನಡುವೆ ಅರಳುವ ಅವರ ರಾಜಕೀಯ ನಿತ್ಯನೂತನವಾದುದು. ಉತ್ತಮ ರಾಜಕೀಯ ಮಾಡಲು ಅಧಿಕಾರವೇ ಇರಬೇಕು ಎಂದೇನಲ್ಲ. ಗಾಂಧೀಜಿ ಯಾವ ಅಧಿಕಾರದಲ್ಲಿಯೂ ಇರದೆ, ಯಾವ ಪದವಿಯನ್ನೂ ಬಯಸದೆ ಈ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಡುವುದರ ಮೂಲಕ ಮಹಾತ್ಮರಾಗಿ ಜನತೆಯ ಮನದಂಗಳದಲ್ಲಿ ಹಸಿರಾದರು.

ಇದೇ ರೀತಿ ಲೋಹಿಯಾ ಮತ್ತು ಜಯಪ್ರಕಾಶ ನಾರಾಯಣರ ರಾಜಕೀಯ ವಿಷಯಗಳೂ ಕೂಡ ತುಂಬಾ ಮುಖ್ಯವಾದವುಗಳು. ಇವರೂ ಕೂಡ ಯಾವ ಅಧಿಕಾರದಾಸೆ ಮಾಡದೆ ದೇಶಕ್ಕಾಗಿ ದುಡಿದವರು. ನಿಜವಾದ ಸ್ವಾತಂತ್ರ್ಯ-ನಿಜವಾದ ಸಮಾನತೆಯನ್ನು ನಾವು ಬಯಸುವದಾದರೆ ಮಾರ್ಕ್ಸನ ರಾಜಕೀಯ ತತ್ತ್ವಗಳು ತುಂಬಾ ಪ್ರಯೋಜನಕಾರಿಯಾಗುತ್ತವೆ.

ನಿಜವಾದ ರಾಜಕೀಯ ಪ್ರಜ್ಞೆ ಹಾಗೂ ನಾಡಿನ ಕಳಕಳಿ ಇಂದಿನ ರಾಜಕೀಯ ಪಕ್ಷಗಳ ಪ್ರಣಾಳಿಕೆಯಲ್ಲಿರದೆ, ರಾಷ್ಟ್ರಪ್ರೇಮಿಗಳಲ್ಲಿ - ಪ್ರಜ್ಞಾವಂತ ಪ್ರಜೆಗಳಲ್ಲಿ ಪ್ರಗತಿಪರ ಸಾಹಿತಿಗಳಲ್ಲಿ ದುಡಿದು ಜನತೆಯ ಬೆವರ ಹನಿಯಲ್ಲಿ ಇರುತ್ತದೆ. ಇಂದು ಕಣ್ಣಿಗೆ ಕಾಣುತ್ತಿರುವುದು ಮೂರನೆ ದರ್ಜೆಯ ರಾಜಕೀಯ. ಈ ರಾಜಕಾರಣಿಗಳ ಮೂಲ ಉದ್ದೇಶ ಸ್ವಾರ್ಥವೇ ಆಗಿರುವುದರಿಂದ ಅವರು ಆ ಕ್ಷೇತ್ರಕ್ಕೆ ಹೊಸಬರನ್ನು ಬರದಂತೆ ಮಾಡಿದ್ದಾರೆ. ಆದ್ದರಿಂದ ಮೌಲ್ಯಗಳು ಮೂಲೆಗೆ ಸೇರಿ ಭವನಗಳು-ಕಟ್ಟಡಗಳು ತಲೆಯೆತ್ತಿ ನಿಂತಿವೆ. ಸೈದ್ಧಾಂತಿಕ ರಾಜಕೀಯ ಮಾಯವಾಗಿ ಸ್ವಾರ್ಥ ರಾಜಕೀಯ ಬೆಳೆಯುತ್ತಿದೆ. ಇದಕ್ಕಿರುವ ಒಂದೇ ಪರಿಹಾರವೆಂದರೆ ರಾಜಕೀಯ ಕ್ಷೇತ್ರದಲ್ಲಿ ಪ್ರಜ್ಞಾವಂತ ಪ್ರಮಾಣಿಕರ ಪ್ರವೇಶವಾಗಬೇಕು ರಾಜಕೀಯದಲ್ಲಿ ಕೇವಲ ಪ್ರಾಮಾಣಿಕತೆಯೊಂದೇ ಇದ್ದರೆ ಸಾಲದು ಅದರೊಂದಿಗೆ ವಿಚಾರವಂತಿಕೆ, ಕೆಲಸ ಮಾಡುವ ಉತ್ಸಾಹ ಇರಬೇಕು. ಜನಸಾಮಾನ್ಯ ವಿಚಾರವಂತನಾಗುತ್ತಾ ರಾಜಕೀಯ ಪ್ರಜ್ಞೆಗಳನ್ನು ಬೆಳೆಸಿಕೊಂಡಾಗ ಮಾತ್ರ ರಾಜಕೀಯ ಕ್ಷೇತ್ರದಲ್ಲಿ ಒಳ್ಳೆಯ ಜನರು ಬರಲು ಸಾಧ್ಯ. ಎಲ್ಲ ರಾಜಕೀಯ ಪಕ್ಷಗಳು ತಾವು ಬಡವರ ಪರವೆಂದೇ ಹೇಳುತ್ತವೆ, ಎಲ್ಲ ರಾಜಕಾರಣಿಗಳು ತಾವು ಸಮಾಜವಾದಿಗಳೆಂದೇ ಹೇಳುತ್ತಾರೆ. ಇವರ ಮಾತಿನ ಸತ್ಯಾಂಶವನ್ನು ತಿಳಿದುಕೊಳ್ಳುವ ಶಕ್ತಿ ಜನಸಾಮಾನ್ಯನಿಗೆ ಬಂದಾಗ ಮಾತ್ರ ಹೊಸ ಬದಲಾವಣೆ ಸಾಧ್ಯ. ಅಲ್ಲಿಯವರೆಗೆ ಮೌಲ್ಯಾಧಾರಿತ ರಾಜಕೀಯ, ಭಾಷಣಗಳಲ್ಲಿ, ಸಮಾಜವಾದ ಗೋಡೆಗಳಲ್ಲಿ ನೇತಾಡುತ್ತಿರುತ್ತವೆ.

ಸಿದ್ಧಗಂಗಾ.

# ಅಂತರಂಗದ ಸತ್ಯಗಳು

—ಸತೀಶುಲಕರ್ಣಿ, ವಿದ್ಯಾನಗರ, ಹಾವೇರಿ, ಧಾರವಾಡ ಜಿಲ್ಲೆ.

ಹಲವು ಸಲ ನಮ್ಮ ನಿಜ ಅನಿಸಿಕೆ ನಮಗೆ ಹೇಳಲು ಸಾಧ್ಯವಾಗುವುದಿಲ್ಲ. ಅನೇಕ ಬಾರಿ ನಮ್ಮ ಅಂತರಂಗದ ಸತ್ಯ ಹೊರ ಬಂದು ಮಾತಾಡುವುದಿಲ್ಲ.

ಹತ್ತಿರದ ಗೆಳೆಯ ಒಂದು ರೀತಿಯಲ್ಲಿ ಉಪಜೀವನಕ್ಕೆ ಮಾಡುವ ವೃತ್ತಿಯ ಮೇಲಾಧಿಕಾರಿ, ಹಲವು ಹತ್ತಿರದವರು ಮಾಡುವ ತಪ್ಪುಗಳಿಗೆ ಮೌನ ಸಮ್ಮತಿ ನಾವು ನೀಡುತ್ತೇವೆ. ಎಷ್ಟೋ ಸಲ ಹೇಳಲಾದ ಸತ್ಯದ ಸಂಕಷ್ಟವನ್ನು ಅನುಭವಿಸುತ್ತ ಮರೆತುಬಿಡುತ್ತೇವೆ.

ಸೃಜನಶೀಲ ಲೇಖಕನೊಬ್ಬ ಅನುಭವಿಸುವ ಅವಮಾನ ಯಾತನೆಗಳು ಕೂಡ ಮೌಲಿಕವಾಗಲು ಇಂಥ ಇಕ್ಕಟ್ಟುಗಳು ಕಾರಣವಾಗಿರಬಹುದು. ಒಬ್ಬ ವಿಚಾರವಂತ ಮನುಷ್ಯನ ಮನಸ್ಸಿಗೆ, ಹೊಂದಾಣಿಕೆ, ಒಪ್ಪಿಗೆ ಅತ್ಯಂತ ಕಷ್ಟದ ಕೆಲಸಗಳು. ಅದರಲ್ಲಿ ಇಂಥ ಇಕ್ಕಟ್ಟಿಗೆ ನಾವು ತುತ್ತಾಗುತ್ತೇವೆ.

ಬಹಳಷ್ಟು ಬಾರಿ ಒಂದು ಘಟನೆಗೆ ಕಾರಣಗಳನ್ನು ಹುಡುಕುತ್ತ, ಇಂಥದಕ್ಕೆ ಇದೇ ಕಾರಣವೆಂದು ಗೊತ್ತಿದ್ದರೂ ನಾವು ಬಹಿರಂಗಗೊಳಿಸುವುದಿಲ್ಲ, ತುಟಿಗಳ ಮಾತಿನಲ್ಲಿ ಸತ್ಯವನ್ನು ಮಣ್ಣು ಮಾಡಿಬಿಡುತ್ತೇವೆ.

ವಸ್ತುಸ್ಥಿತಿಯ ಅರಿವು ಇರುವ ಅನೇಕರು ಕಣ್ಣೆದುರು ಸುಡುವ ಬೆಂಕಿಯನ್ನು ತಪ್ಪೆಂದು ಪರಿಭಾವಿಸುವ ಸಂಕೀರ್ಣ ಸ್ಥಿತಿ ಇಂದಿದೆ. ರಾಜಕೀಯ ಒತ್ತಡಗಳು ಪ್ರಭಾವದ ಅಸ್ತ್ರಗಳು ಅನಿವಾರ್ಯ ಎನ್ನಿಸುವಷ್ಟು ಅಗತ್ಯವಾಗಿದೆ.

ದಿಢೀರ್ ಜನಪ್ರಿಯತೆ, ಮತ್ತೊಬ್ಬರನ್ನು ಹತ್ತಿಕ್ಕುವ ಕ್ರಿಮಿನಲ್ ಮನೋಭಾವ ಈವ್ಯವಸ್ಥೆಯೊಳಗಿನಿಂದ ನಮ್ಮಲ್ಲಿ ಗುಣಾತ್ಮಕ ರೂಪ ಕೊಡುತ್ತೇವೆ. ಅನೇಕ ಸಮಕಾಲೀನ ಸವಾಲುಗಳು ಸೃಜನಶೀಲ ಲೇಖಕನನ್ನು ಕಾಡುತ್ತವೆ.

ನಿಜವಾದ ದೊಡ್ಡ ಲೇಖಕ ತನ್ನ ಅಂತರಂಗದ ಸತ್ಯಗಳಿಗೆ ಬಾಯಿ ಕೊಡುತ್ತಾನೆ. ಕಲಾಕೃತಿಯ ರೂಪ ಕೊಡುತ್ತಾನೆ. ಜೀವಂತ ಮನುಷ್ಯ ಸಾವಿರ ಸುಳ್ಳು ಸರದಾರರ ನಡುವೆ ಸತ್ಯಕ್ಕೆ ಕೈ ಎತ್ತುತ್ತಾನೆ.

ಯಾರೂ ಹೇಳದ, ಎಲ್ಲರಿಗೂ ಅನಿಸಿದರೂ ವ್ಯಕ್ತ ಮಾಡದ ಮಾತು ನಿಜವಾದ ಸೃಹನಶೀಲ ಲೇಖಕನಿಗೆ ಮಾತ್ರ ಹೇಳಲು ಸಾಧ್ಯ. ಅಂತರಂಗದಲ್ಲಿ ಉರಿವ ಸತ್ಯಗಳು ಹೊರಬೀಳುವ ಪರಿ ಇದಾಗಿರಬಹುದಾಗಿದೆ.



ಸತ್ಯ, ಸುಳ್ಳು, ಕನಸು, ಕನವರಿಕೆ, ವಾಸ್ತವ, ಆಶಯ, ಗೊಂದಲಗಳಿರುವ ಮನುಷ್ಯ ಬೆಳೆಯಲು ಸಾಧ್ಯ, ಮನುಷ್ಯರಿಗೆ, ಮನುಷ್ಯನ ನಿಜರೂಪ ತೋರಿಸಲು ಸಾಧ್ಯ.

ಎಂಥ ಸಾಮಾನ್ಯ ಮನುಷ್ಯನಿಗೂ ಒಂದು ಅಂತರಂಗವಿರುತ್ತದೆ. ತನ್ನದೇ ಆದ ನಿರ್ಧಾರಗಳಿರುತ್ತವೆ. ಜನಮನಕ್ಕೂ ಒಂದು ಅರ್ಥೈಸುವ ಪಾತಳಿ ಇರುತ್ತದೆ. ಜನಜಂಗುಳಿ ನಡುವೆ, ಅಂತರಂಗದ ಸತ್ಯಗಳೂ ಇರುತ್ತವೆ.

ಅಂಥ ಸತ್ಯಗಳಿಗೆ ನಾವು ಸ್ಪಂದಿಸುವ ಶಕ್ತಿ ನಮಗಿರಬೇಕು.

ಪರಂಪರಾಗತವಾಗಿ ಜನರನ್ನು ದಿಕ್ಕು ತಪ್ಪಿಸುವ ಭ್ರಾಮಕ ಚಿಂತನೆಗಳನ್ನು ಕತ್ತರಿಸಿ ಹಾಕಿ ನಿಜ ಚಿಂತನೆಗೆ ದಾರಿ ಮಾಡಿಕೊಡುವ ಶಕ್ತಿ ಕೂಡ ಇಂಥ ಸತ್ಯಗಳಾಗಿವೆ ಎಂದು ನನ್ನ ನಂಬುಗೆ.

# ಭಾನುವಾರ ವಿಶ್ರಮದಿನ-ಏಕೆ?

— ಪೊಯಕ್ಕರ ಶ್ರೀ ಕೆ. ಗಣೇಶ್, ಕೋಟೆರಸ್ತೆ, ಕಾಸರಗೋಡ್, ಕೇರಳ.

ವಾರದ ಏಳು ದಿನಗಳಲ್ಲಿ ಮೊದಲ ದಿನವೆಂದು ಅರಿಯಲ್ಪಡುವ ಭಾನುವಾರ (ರವಿವಾರ ಇಲ್ಲವೇ ಆದಿತ್ಯವಾರ) ಸಾಮಾನ್ಯ ಎಲ್ಲಾಕಡೆ ರಜಾದಿನ ಇಲ್ಲವೇ ವಿಶ್ರಮದಿನವಾಗಿರುತ್ತದೆ. ಏಕೆ ಹೀಗಾಯಿತು? ವಾರದ ಇತರ ದಿನಗಳಾದ ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿವಾರ ದಿನಗಳು ರಜಾದಿನಗಳಾಗಲಿಲ್ಲ ಏಕೆ ಎಂಬ ಪ್ರಶ್ನೆ ಬರುತ್ತದೆ. ಬೈಬಲ್‌ನ ಹಳೆಯ ನಿಯಮದ ಮೊದಲ ಅಧ್ಯಾಯದಲ್ಲಿ ದೇವರು ಪ್ರಪಂಚವನ್ನು ಸೃಷ್ಟಿಸಿದ ಬಗ್ಗೆ ವಿವರಿಸಲಾಗಿದೆ.

ಸೃಷ್ಟಿಯ ಪ್ರಕ್ರಿಯೆ 6 ದಿನಗಳವರೆಗೆ ಮುಂದುವರೆಯಿತು. ಮೊದಲದಿನ ಆಕಾಶ, ಭೂಮಿ, ಬೆಳಕನ್ನು ಸೃಷ್ಟಿಸಿದ್ದರೆ ಎರಡನೆಯದಿನ ಜಲದ ಸೃಷ್ಟಿಯಾಯಿತು ಮೂರನೆಯ ದಿನ ಭೂಮಿಯಲ್ಲಿ ಎಲ್ಲೆಲ್ಲೂ ಇದ್ದ ನೀರನ್ನು ಕೆಲವು ಕಡೆಯಿಂದ ತೆಗೆದು ಅಲ್ಲಿ ನೆಲವನ್ನುಂಟುಮಾಡಿ ಆ ನೆಲದಲ್ಲಿ ಮರ-ಗಿಡ-ಹುಲ್ಲು ಬೆಳೆಯುವಂತೆ ಮಾಡಲಾಯಿತು. ನಾಲ್ಕನೆಯ ದಿನ ನಕ್ಷತ್ರಗಳನ್ನು ಸೃಷ್ಟಿಸಿ ರಾತ್ರಿ-ಹಗಲು-ಸಂವತ್ಸರವೆಂದು ಬೇರ್ಪಡಿಸಲಾಯಿತು. ಐದನೇ ದಿನ ಜಲ ಜಂತುಗಳನ್ನು ಪಕ್ಷಿಗಳನ್ನು ಸೃಷ್ಟಿಸಿ, ಆರನೆಯ ದಿನ ಮೃಗಗಳಿಗೂ ಮನುಷ್ಯರಿಗೂ ಜನ್ಮ ಕೊಡಲಾಯಿತು ಎಂದು ವಿಶ್ವಾಸ.

ಅನ್ಯಮತೀಯರಲ್ಲೂ ಹೀಗೊಂದು ವಿಶ್ವಾಸವಿದೆಯಾದರೂ ಅದರಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಕಂಡುಬರುತ್ತದೆ. ಏಳನೆಯ ದಿನ ಸಕಲ ಪ್ರವೃತ್ತಿಗಳಿಂದಲೂ ನಿವೃತ್ತನಾದುದರಿಂದ ಪರಮಾತ್ಮನು ಆ ದಿನವನ್ನು ಅನುಗ್ರಹಿಸಿ ಶುದ್ಧೀಕರಿಸಿದನು.

ಹೀಗೆ ಅನುಗ್ರಹಿಸಿದ ದಿನವನ್ನು ಶಾಬತ್ತ ಎಂದು (ಶಬ್ಬತ್ತ, ಸಾಬತ್ತ ಎನ್ನುವುದೂ ಇದೆ)ಕರೆಯುತ್ತಾರೆ. ಕ್ರೈಸ್ತಿಯನ್ನರಿಗೆ ಶಾಬತ್ತ ಭಾನುವಾರವಾಗಿದೆ. ಮುಸ್ಲಿಮರಿಗೂ ಯಹೂದಿಗಳಿಗೂ ಶಾಬತ್ತು ಇದೆ. ಮುಸ್ಲಿಮರಿಗೆ ಈ ಅನುಗ್ರಹಿತ ದಿನ ಶುಕ್ರವಾರವಾದರೆ ಯಹೂದಿಗಳಿಗೆ ಶನಿವಾರವಾಗಿದೆ, ಹಿಂದೂಮತೀಯರಿಗೂ ಬೌದ್ಧಮತೀಯರಿಗೂ ಹೀಗೆ ವಾರಕ್ಕೊಮ್ಮೆ ಬರುವ ಅನುಗ್ರಹಿತ ದಿನವಿಲ್ಲ ಆದರೆ ಬೇರೆ ಬೇರೆ ವಿಶೇಷ ದಿನಗಳಿವೆ.

ಆದರೂ ಶೇ.80ರಷ್ಟು ಹಿಂದೂಗಳಿರುವ ಭಾರತದಲ್ಲಿಭಾನುವಾರವನ್ನು ರಜಾದಿನವಾಗಿ ಆಚರಿಸಲಾಗುತ್ತದೆ. ಒಂದು ಚಿಕ್ಕವಿಭಾಗ ಶುಕ್ರವಾರವನ್ನು ಅನುಗ್ರಹಿತ ದಿನವಾಗಿ ಅನುಸರಿಸುತ್ತಿದೆಯಾದರೂ ಮತ್ತೆ ಶನಿವಾರ ಕಳೆದು ಭಾನುವಾರ ಬರುವಾಗ ಕಚೇರಿಗಳೂ ವಿದ್ಯಾಭ್ಯಾಸ ಕೇಂದ್ರಗಳೂ ಪೇಟೆಯೂ ಹೆಚ್ಚಾಗಿ ಬಂದೇ ಆಗಿರುವುದರಿಂದ ಶುಕ್ರವಾರವನ್ನು ರಜಾದಿನವಾಗಿ ಆಚರಿಸುವುದರಿಂದ ಅವರಿಗೆ ನಷ್ಟವೇ



ಜಾಸ್ತಿ. ಬ್ರಿಟಿಷ್ ಆಡಳಿತ ಸುಮಾರು ಒಂದೂವರೆ ಶತಮಾನ ಕಾಲ ಈ ನಾಡನ್ನು ಆಳಿದ ಬ್ರಿಟಿಷರ ಕೊಡುಗೆಯಾಗಿದೆ. ಭಾನುವಾರದ ರಜೆ ಎಂದು ವಾದಿಸುವವರಿದ್ದಾರೆ. ಆದರೆ ಬ್ರಿಟಿಷರು ಇಲ್ಲಿಂದ ಹೊರಟು ಹೋಗಿ 46ವರ್ಷಗಳಾದವು. ಈ 46 ವರ್ಷಗಳಲ್ಲಿ ಅಂದಿನ ಬ್ರಿಟಿಷ್ ಕಾನೂನು-ಕಾಯಿದೆ-ರೀತಿ-ನೀತಿಗಳಲ್ಲಿ ಅದೆಷ್ಟೊ ಬದಲಾವಣೆಗಳನ್ನು ತರಲಾಗಿದೆ. ಆದರೆ ಭಾನುವಾರ ರಜಾದಿನವಾಗಿರುವುದನ್ನು ಬದಲಾಯಿಸುವುದಕ್ಕಾಗಲಿಲ್ಲ. ಹಾಗೆಯೇ ಭಾರತದ ಕೆಲವು ಪ್ರದೇಶಗಳಲ್ಲಿ ಸುಮಾರು 600 ವರ್ಷಗಳಷ್ಟು ದೀರ್ಘಕಾಲ ಮುಸ್ಲಿಂ ಚಕ್ರವರ್ತಿಗಳ ಆಡಳಿತವಿತ್ತು. ಆಗ ಶುಕ್ರವಾರ ವಿಶ್ರಮ ದಿನವಾಗಿದ್ದರೂ ಬ್ರಿಟಿಷರು ಬಂದ ಬಳಿಕ ಅದು ಭಾನುವಾರವಾಗಿ ಬದಲಾಯಿತು.

ಬ್ರಿಟಿಷ್ ಆಡಳಿತದಲ್ಲೂ ಭಾರತದ ಕಲೆ-ಸಾಹಿತ್ಯ-ಆಚಾರಗಳನ್ನೂ ಅಭ್ಯಸಿಸಿ ಗೌರವಿಸುತ್ತಿದ್ದವರಿದ್ದರು, ಅವರು ಭಾರತೀಯ ವಿಜ್ಞಾನದ ಮಹತ್ವವನ್ನು ಅರ್ಥ ಮಾಡಿಕೊಂಡಿದ್ದರು. ಗೌರ್ನರ್ ಜನರಲ್ ವಾರನ್ ಹೇಸ್ಟಿಂಗ್ಸನು ಭಾರತೀಯ ಸಂಸ್ಕಾರ ಪಠನವನ್ನು ಬಹಳಷ್ಟು ಪ್ರೋತ್ಸಾಹಿಸಿದ ಅಧಿಕಾರಿ.

ಆ ಕಾಲದಲ್ಲಿ ಕಾಶಿ ಸಂಸ್ಕೃತ ಪಠನಕ್ಕೆ ಪ್ರಸಿದ್ಧ ಕೇಂದ್ರವಾಗಿತ್ತು. ಚೌಲ್ಸ್ ವಿಲ್ಕಿನ್ಸ್ ಎಂಬ ಜನಕ ಇಂಗ್ಲಿಷ್ ಪಂಡಿತನನ್ನು ಗೌರ್ನರ್ ಜನರಲ್ ಪ್ರತ್ಯೇಕ ಆಸಕ್ತಿ ವಹಿಸಿ ಸಂಸ್ಕೃತ ಕಲಿಯುವುದಕ್ಕಾಗಿ ಕಾಶಿಗೆ ಕಳುಹಿಸಿದರು. 1785ರಲ್ಲಿ ವಿಲ್ಕಿನ್ಸ್ ಭಗವದ್ಗೀತೆಯ ಒಂದು ಇಂಗ್ಲಿಷ್ ಗ್ರಂಥವನ್ನು ಹೊರತಂದರು.

ಹಾಗೆಯೇ ಇಂಗ್ಲಿಷ್ ಭಾಷಾ ಪಂಡಿತರ ಪರಂಪರೆಯಲ್ಲಿ ಅತಿ ಪ್ರಮುಖನಾಗಿದ್ದ ಸರ್‌ವಿಲ್ಯಂ ಜೋನ್ಸ್ ಸುಪ್ರೀಂಕೋರ್ಟಿನ ನ್ಯಾಯಾಧೀಶರಾಗಿದ್ದರು. ನ್ಯಾಯಾಲಯದಿಂದ ಬಿಡುವುಸಿಕ್ಕಿದಾಗಲೆಲ್ಲ ಅವರು ಭಾರತೀಯ ಸಾಹಿತ್ಯ ಕೃತಿಗಳನ್ನು ಕುರಿತು ಅಭ್ಯಾಸ ಮಾಡತೊಡಗಿದರು. ಇದು ಅಪಾರವಾದ ಒಂದು ಸಾಗರವೇ ಆಗಿದೆ, ಒಬ್ಬ ವ್ಯಕ್ತಿಯ ಶ್ರಮ ಮಾತ್ರ ಇಲ್ಲಿಸಾಲದು ಎಂದು ಮನಗಂಡ ಸರ್‌ವಿಲ್ಯಂ ಅದರ ಪಠ್ಯಕ್ಕಾಗಿ ಒಂದು ಕೇಂದ್ರವನ್ನು ಆರಂಭಿಸಲು ತೀರ್ಮಾನಿಸಿದರು.

ಹಾಗೆ ಕಲ್ಕತ್ತದ ಏಶ್ಯಾಟಿಕ್ ಸೊಸ್ಯಾಟಿ ಸುಮಾರು 110 ವರ್ಷಗಳಿಗೆ ಹಿಂದೆ ಸ್ಥಾಪಿಸಲ್ಪಟ್ಟಿತು. ಆಸಕ್ತ ಪಂಡಿತರನ್ನು ಹಾಗೂ ಘನಪಂಡಿತರನ್ನು ಸರ್ ವಿಲ್ಯಂ ನ್ಯಾಯಾಲಯದ ಕೊಠಡಿಯಲ್ಲಿ ಒಟ್ಟು ಸೇರಿಸಿದರು. 29ಮಂದಿ ಅಲ್ಲಿ ಹಾಜರಾದರು. ಏಶ್ಯಾಟಿಕ್ ಸೊಸ್ಯಾಟಿ ಮುಂದಿನ ದಶಕಗಳಲ್ಲಿ ದೊಡ್ಡ ಸಂಸ್ಕೃತ ಭಾಷಾ ಪಠನೆಯ ಹಾಗೂ ಗವೇಷನೆಯ ಕೇಂದ್ರವಾಗಿ ಮಾರ್ಪಟ್ಟಿತು

ಎ. ಬಿ. ಕೀತರಂತೆ ಅನೇಕ ಇಂಗ್ಲಿಷರ ಸಂಸ್ಕೃತ ಗ್ರಂಥಗಳನ್ನು ಅಭ್ಯಾಸ ಮಾಡಿಕೊಂಡು ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದಾರೆ. ಎಡ್ಗರ್ ಪಸ್ಸನ್ ಮೊದಲಾದ ಒಂದು ದೊಡ್ಡ ಇಂಗ್ಲಿಷ್ ಪಂಡಿತರ ಸಂಘ ಭಾರತೀಯ ಸಮೂಹಗಳ

ಕುರಿತು ಅಭ್ಯಾಸ ಮಾಡಿದಂತೆ ಒಬ್ಬ ಭಾರತೀಯ ಅಂಥ ಪ್ರಯತ್ನ ಮಾಡಿದ್ದಾರೆಯೇ ಎಂಬಸಂಶಯ ಬರಬಹುದು. ಅವರ ನರವಂಶ ಶಾಸ್ತ್ರ ಪರಂಪರೆ ಇಂದಿಗೂ ನಮ್ಮ ನ್ಯಾಯಾಲಯಗಳಲ್ಲಿ ಮತ್ತಿತರ ಕಡೆಗಳಲ್ಲಿ ಉದ್ಧರಿಸಲ್ಪಡುವುದಿದೆ.

ದೀರ್ಘಕಾಲ ನಮ್ಮನ್ನಾಳಿದ ಬ್ರಿಟಿಷರು ಕೆಲವೊಮ್ಮೆ ನೀತಿರಹಿತ ಆಡಳಿತವನ್ನು ಇಲ್ಲಿ ನಡೆಸಿದ್ದರೂ ನಮ್ಮ ಸಂಸ್ಕಾರವನ್ನು ನಾಶಮಾಡಿ ಕ್ರೈಸ್ತ ಸಂಸ್ಕಾರವನ್ನು ನಮ್ಮ ಜನರ ಮೇಲೆ ಹೇರಲು ಒತ್ತಾಯಮಾಡಿಲ್ಲವೆಂಬುದಂತೂ ಸತ್ಯ. ಅವರು ಮತಾಂತರಕ್ಕೆ ಪ್ರೋತ್ಸಾಹ ನೀಡಿರಬಹುದು. ಅವರ ಭಾಷೆ—ಧರ್ಮವನ್ನು ಬೆಳೆಸಲು ಶ್ರಮಿಸಿರಬಹುದು. ಆದರೆ ಭಾರತೀಯ ಭಾಷೆಗಳ, ಸಂಸ್ಕೃತಿಗಳ ನಾಮಾವಶೇಷ ಮಾಡಲು ಹೋಗಲಿಲ್ಲ. ಬದಲು ಅದರ ಬಗ್ಗೆ ಆಸಕ್ತಿಯಿಂದ ಅಧ್ಯಯನ ಮಾಡಿದರು.

ಇಂದು ಫ್ರೆಂಚ್, ಜರ್ಮನಿ, ರಷ್ಯನ್ ಭಾಷೆಗಳನ್ನು ಇಂಗ್ಲಿಷ್ ಮೂಲಕ ಅಭ್ಯಸಿಸುವಂತೆ ಅಂದು ಅವರು ಸಂಸ್ಕೃತವನ್ನು ಇಂಗ್ಲಿಷ್ ಮೂಲಕ ಅಭ್ಯಾಸ ಮಾಡಿಕೊಂಡರು. ಹಾಗೂ ಹಲವು ವಿಷಯಗಳನ್ನು ತಿಳಿದುಕೊಂಡರು.

ಅರ್ಥಕೋಶ: ಚೇಂಬರ್ಸ್ ಇಂಗ್ಲಿಷ್. ಅರ್ಥಕೋಶದಲ್ಲಿ ಬರುವ "ಕೂಲಿ"ಪದ ಭಾರತೀಯ ಭಾಷೆಗಳಲ್ಲಿ ಕಂಡು ಬರುವಂಥದ್ದು. ಭಾರತದಿಂದ ದಕ್ಷಿಣ ಆಫ್ರಿಕ ಮತ್ತಿತರ ಕಡೆಗೆ ಕಳಿಸುತ್ತಿದ್ದ ಗುಲಾಮರನ್ನು ಹಾಗೆ ಕರೆಯಲಾಗುತ್ತಿತ್ತು. ಹಾಗೆಯೇ ಜಂಗಲ್ ಎಂದು ಕರೆಯುವ ಪದವೂ ಭಾರತೀಯ ಶಬ್ದವೆ. ಸಂಸ್ಕೃತದ ಜಂಗಲಂ ಹಿಂದಿಯಲ್ಲಿ ಜಂಗಲ್ ಆಯಿತು. ಇಂಗ್ಲೀಷ್‌ನಲ್ಲೂ ಮುಂದುವರಿಯಿತು. ಇಂಥ ಹಲವು ಶಬ್ದಗಳಿವೆ.

ಹಾಗೆ ಹಲವು ವಿಷಯಗಳಲ್ಲೂ ನಾವು ಪರಸ್ಪರ ಕೊಡು–ಕೊಳು ವ್ಯವಹಾರ ಮಾಡಿಕೊಂಡಿದ್ದೇವೆ. ಅವರು ಭಾನುವಾರವನ್ನು ವಿಶ್ರಮ ದಿನವಾಗಿ ಅನುಸರಿಸುತ್ತಾ ಬಂದರು. ನಾವು ಹಾಗೆಯೇ ಮಾಡಿದೆವು ಬದಲಿಗೆ ಹುಣ್ಣಿಮೆಯದಿನ ಏಕಾದಶಿಯ ದಿನ ಸೋಮವಾರ ಅಥವಾ ಮಂಗಳವಾರ ರಜಾದಿನವಾಗ ಬೇಕೆಂದು ನಾವು ಒತ್ತಾಯಿಸಲಿಲ್ಲ. ಬ್ರಿಟಿಷರು ಇಲ್ಲಿಂದ ಹೊರ–ಹೋದ ಬಳಿಕವು ಹಾಗೆಂದು ಪ್ರಯತ್ನ ನಮಲ್ಲಿ ಆಗಲಿಲ್ಲ.

ಭಾರತದ ಒಟ್ಟು ಜನಸಂಖ್ಯೆಯ ಶೇ. 2ರಷ್ಟು ಮಾತ್ರವಿರುವ ಕ್ರಿಶ್ಚಿಯನ್ನರ ಒತ್ತಾಯ ಒತ್ತಡದಿಂದ ಭಾನುವಾರವೇ ವಿಶ್ರಾಂತಿ ದಿನವಾಗಿ ಮುಂದುವರಿದಿರಲು ಸಾಧ್ಯತೆ ಇಲ್ಲ. ರಾಷ್ಟ್ರದ ಆಡಳಿತದ ಮೇಲೆ ಅಂಥ ಬಾಹ್ಯ ಒತ್ತಡವೇನೂ ಇಲ್ಲ.

ಜೆರುಸಲೆಂತ ಹೆರೋಡ ರಾಜನಿಗೂ ಕಂಸನಿಗೂ, ಯೇಸುಕ್ರಿಸ್ತನಿಗೂ, ಶ್ರೀಕೃಷ್ಣನಿಗೂ (ಅವರ ಜೀವನ ಕಥೆಗೆ) ಸಾಮ್ಯವನ್ನು ಕಾಣುವವರಿದ್ದಾರೆ. ಈಗಲೂ ವಿದ್ಯಾಲಯಗಳಲ್ಲಿ ಕ್ರಿಸ್‌ಮಸ್ ರಜೆ ಎಂದು 1-2 ವಾರ ಬಿಡುವು ಇರುವುದಿದೆ.



ಈಗಿನ ಬೇಸಿಗೆ ರಜೆಯನ್ನು ದಶಕಗಳ ಹಿಂದೆ 'ಈಸ್ಟರ್ ಹೋಲಿಡೇ' ಎಂದು ಕರೆಯುವ ಕ್ರಮವಿತ್ತು. ನಾವು ಹಿಂದೂ ಮತದವರು ದಯೆ–ಸ್ನೇಹ–ಸಾಹೋದಯವನ್ನು ಪರಸ್ಪರ ಕಾಪಾಡಿಕೊಂಡು ಬಂದಿರುವುದರ ಉದಾಹಾರಣೆಗಳಾಗಿವೆ ಇವು.

ಯಹೂದಿಗಳ ಸಂಖ್ಯೆ ಭಾರತದಲ್ಲಿ ಹೆಚ್ಚಾಗಿಲ್ಲ ಇಸ್ರೇಲಿನಲ್ಲಿ ರೋಮನ್ ಆಡಳಿತವೂ ಒತ್ತಡವೂ ಆರಂಭವಾಗುವುದರೊಂದಿಗೆ ಒಂದನೇ ಶತಮಾನದಲ್ಲಿ ಅನೇಕ ಮಂದಿ ಯುಹೂದಿಗಳು ಅಲ್ಲಿಂದ ಅನ್ಯ ರಾಷ್ಟ್ರಗಳತ್ತ ಪಲಾಯನ ಮಾಡಿದ್ದರು. ಅವರಲ್ಲಿ ಕೆಲವರು ಭಾರತಕ್ಕೂ ಬಂದಿದ್ದರು. ಒಂಬತ್ತನೇ ಶತಮಾನದಲ್ಲಿ ಭಾರತದಲ್ಲಿ ಈಸುಪ್ಪಾ ರಬ್ಬಾನೆ ಎಂಬ ಒಬ್ಬ ಯಹೂದಿ ರಾಜನಿದ್ದನು ಹಾಗೆಯೇ ಯಹೂದಿ ಪ್ರಾರ್ಥನಾ ಮಂದಿರಗಳೂ ಇಲ್ಲಿವೆ.

1948 ರಲ್ಲಿ ಇಸ್ರೇಲ್ ಸ್ವತಂತ್ರ ರಾಷ್ಟ್ರವಾಗುವ ವರೆಗೆ ಮುಂಬಯಿ ಮುತ್ತಿತರ ಕಡೆ ಧಾರಾಳ ಯಹೂದಿಗಳಿದ್ದರು. ಆ ಬಳಿಕ ಅವರು ಇಸ್ರೇಲಿಗೆ ಹೋದರು ಸಂಖ್ಯೆ ಬಲದಲ್ಲಿ ಅವರು ಭಾರತದಲ್ಲಿ ಬಹಳ ಕಡಿಮೆ.

ಮುಸ್ಲಿಮರ ವಿಶ್ರಮ ದಿನ ಶುಕ್ರವಾರ, ಯಹೂದಿಗಳಿಗೆ ಶನಿವಾರ, ಕ್ರಿಶ್ಚಿಯನರಿಗೆ ಭಾನುವಾರ ಹಾಗಾಗಿ ಭಾರತದಲ್ಲೂ ಭಾನುವಾರ ರಜಾದಿನವಾಗಿ ಸ್ವತಂತ್ರ ಅಂಗೀಕರಿಸಲ್ಪಟ್ಟಿರಲು ಕಾರಣವೇನೆಂಬುದು ಪ್ರಶ್ನೆ

ಮುಂದುವರಿದ ಲೇಖನ

# ಮಾನಸಿಕ ಶಕ್ತಿಗಳು

ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ, ಶ್ರೀ ಗಾಯತ್ರಿ ಆಯುರ್ವೇದ ಉಚಿತ ಚಿಕಿತ್ಸಾಲಯ
ಗೋಕುಲ, ಹುಬ್ಬಳ್ಳಿ.

ಮೆಸ್ಮರನ ವಿಧಾನ:- ಕೆಲವು ಜನರ ಹಸ್ತಗಳಲ್ಲಿ ಕಾಂತ ಶಕ್ತಿಯು ತೀವ್ರವಾಗಿರುತ್ತದೆ. ಎಂದು ತಿಳಿದು ಬಂದಿದೆ. ಡಾ|| ಮೆಸ್ಮರನ ಕಾಲದಿಂದ ಈಚೆಗೆ ಹಸ್ತದಿಂದ ಕಾಂತ ಶಕ್ತಿಯನ್ನು ಬೀರುವ ವಿಧಾನವು ವೈಜ್ಞಾನಿಕವಾಗಿ ತಿಳಿದು ಬಂದಿದೆ. ಜಗತ್ತಿನಲ್ಲಿ ಎಲ್ಲೆಡೆಗೂ ಪ್ರಯೋಗಿಸಲ್ಪಟ್ಟಿದೆ. ರೋಗಗಳ ಚಿಕಿತ್ಸೆಯನ್ನು ಪರಿಚಿತವಾದ ಔಷಧಿಗಳ ಮುಖಾಂತರ ಮಾಡದೇ ಕಾಂತಶಕ್ತಿಯುಳ್ಳ ಕೈಗಳ ಸವರುವಿಕೆಯಿಂದ ಮಾಡಲ್ಪಡುತ್ತದೆ. ಡಾ|| ಮೆಸ್ಮರನು ಮೊಟ್ಟಮೊದಲು ಈ ವಿಧಾನವನ್ನು ಜನರ ಗಮನಕ್ಕೆ ತಜ್ಞರಿಂದ ಈ ವಿಧಾನಕ್ಕೆ 'ಮೆಸ್ಮರಿಜಮ್' ಎಂದು ಹೆಸರು ಬಂದಿದೆ. ಅನೇಕ ಪ್ರಯೋಗಗಳ ನಂತರ ಮೆಸ್ಮರನು ರೋಗವೆಂಬುದು ಒಂದು ಬಗೆಯಾಗಿದ್ದು ಅದಕ್ಕೆ ಪರಿಹಾರವು ಒಂದೇ ಬಗೆಯಾಗಿದೆ. ಆರೋಗ್ಯ ಸ್ಥಿತಿಯಲ್ಲಿಯೂ ಒಂದೇ ಬಗೆಯದು ಎಂದು ಹೇಳಿದ್ದಾನೆ. ರೋಗಕ್ಕೆ ಮೂಲಕಾರಣ ರೋಗಿಯ ದೇಹದಲ್ಲಿ ಸಾಕಷ್ಟು ಕಾಂತ ಶಕ್ತಿಯು ಇಲ್ಲದಿರುವದೇ ಕಾರಣವಾಗಿದೆ. ಈ ಕೊರತೆಯನ್ನು ತುಂಬಿಕೊಟ್ಟರೆ ರೋಗವು ಯಾವುದೇ ಬಗೆಯಾಗಿದ್ದರೂ ಅದನ್ನು ಗುಣಪಡಿಸಲು ಬರುವುದು. ಈ ಚಿಕಿತ್ಸಾ ಪದ್ಧತಿಗೆ ಅತಿಶಯವಾಗಿ ಬೇಡಿಕೆ ಬರಲು ಮೆಸ್ಮರನು ಸಾಮೂಹಿಕ ಕಾಂತ ಶಕ್ತಿಯ ಪ್ರಯೋಜನವನ್ನು ನಡೆಯಿಸಿದನು. ಅವನು ಒಂದು ಸ್ನಾನದ ತೊಟ್ಟಿಯನ್ನು ಒಂದು ಮರವನ್ನು ಕಾಂತ ಶಕ್ತಿಗೆ ಒಳಪಡಿಸಿ ತೋರಿಸಿದನು. ಈ ಕಾಂತ ಶಕ್ತಿಯಿಂದ ಪ್ರಭಾವಿತವಾದ ವಸ್ತುಗಳು ಕೇವಲ ಸ್ಪರ್ಶದಿಂದ ರೋಗ ನಿವಾರಣೆ ಯಾಗುತ್ತಿತ್ತು. ಮೆಸ್ಮರನು 1915ರಲ್ಲಿ ತೀರಿಕೊಂಡನು. ಅವನ ಶಿಷ್ಯನಾದ ಮಿ|| ಪೂರ್ಗವಿಸ್, ನು ತನ್ನ ಗುರುವಿನ ವಿಧಾನವನ್ನೇ ಅನುಸರಿಸಿ ಪ್ರಯೋಗ ನಡೆಯಿಸಿದನು. ಅಲ್ಲದೆ ಕಾಂತ ಶಕ್ತಿಯನ್ನು ಬೆರಳುತುದಿಗಳ ಸಹಾಯದಿಂದ ಇನ್ನೊಬ್ಬ ವ್ಯಕ್ತಿಯ ದೇಹದಲ್ಲಿ ಸವರಿ ಅವನಲ್ಲಿ ಒಂದು ಬಗೆಯ ನಿದ್ರಾವಸ್ಥೆಯನ್ನು ತಂದು ಒಂದು ಬಗೆಯ ಮೂರ್ಛಾವಸ್ಥೆಯನ್ನು ತರಿಸಬಹುದೆಂದು ತೋರಿಸಿದನು. ಪುನಃ ಸ್ಥಿತಿಯಲ್ಲಿರುವ ವ್ಯಕ್ತಿಯೂ ನಿದ್ರೆಯಲ್ಲಿದ್ದರೂ ತನ್ನ ವಿಚಾರಗಳನ್ನು ವ್ಯಕ್ತಪಡಿಸಬಲ್ಲನು. ಇದಕ್ಕೆ ಮೆಸ್ಮರಿಸಮ್, ಎಂದು ಹೇಳಿದ್ದಾರೆ. ಮಿ|| ಜಾನ್‌ಕಾಲಿಯೋಟಿಸನ್ ಎಂಬುವನು ೧೭೯೧ ರಲ್ಲಿ ಜನಿಸಿದನು. ಅವನಿಗೆ ಭೂತಕಾಲವು ಒಂದು ಶೂನ್ಯವಾದರೆ ಭವಿಷ್ಯತ್ ಕಾಲವು ಮಾತ್ರ ಅನೇಕವಾದದ್ದು. ಸ್ಟೆಥಸ್ಕೋಪನ್ನು ಬಳಸುವುದರಲ್ಲಿ ಇವನು ಮೊದಲಿಗನು. ಮೆಸ್ಮರನ ಸಾಹಸದಿಂದ ವೇದನಾತೀತವಾದ ಶಸ್ತ್ರಕ್ರಿಯೆಗಳನ್ನು ಇವನು ಮಾಡಿತೋರಿಸಿದನು.



## ಮೆಸ್ಮರನ ವಿಧಾನವನ್ನು ಪ್ರಯೋಗಿಸುವದು ಹೇಗೆ?

ಒಬ್ಬ ಮನುಷ್ಯನಲ್ಲಿರುವ ಕಾಂತಶಕ್ತಿಯು ಇನ್ನೊಬ್ಬ ಮನುಷ್ಯನಲ್ಲಿ ಪಸರಿಸಬೇಕಾದರೆ ಅದನ್ನು ದೃಷ್ಟಿಯಿಂದ ಹಸ್ತಸ್ಪರ್ಶದಿಂದ ಕಾಂತಶಕ್ತಿಗೆ ಅಧೀನವಾಗಿ ಮಾಡಬಹುದು. ಹಸ್ತಸ್ಪರ್ಶ ಹಾಗು ಕಣ್ನೋಟದಿಂದ ಕಾಂತಶಕ್ತಿಯನ್ನು ಇನ್ನೊಬ್ಬನಲ್ಲಿ ಹೆಚ್ಚು ಹೆಚ್ಚಾಗಿ ದಾಟಿಸಬಹುದು. ಮೆಸ್ಮರಿಮ್‌ನಲ್ಲಿ ಈ ಹಸ್ತಸ್ಪರ್ಶ ಮತ್ತು ಕಣ್ನೋಟ ಇವುಗಳನ್ನು ಇಚ್ಛಿತವ್ಯಕ್ತಿಗೆ ನಿದ್ರೆಗೆ ಒಳಗಾಗುವವರೆಗೂ ಪ್ರಯೋಗಿಸಬೇಕು. ಹೆಚ್ಚು ಹೆಚ್ಚು ಕಾಂತ ಶಕ್ತಿಯನ್ನು ಇನ್ನೊಬ್ಬನ ದೇಹದಲ್ಲಿ ಹರಿಸಿದಾಗ, ಆ ಶಕ್ತಿ ಅವನಲ್ಲಿ ಪ್ರತಿರೋಧಿಸಲು ಅಸಾಧ್ಯವಾಗುವ ಮಟ್ಟಿಗೆ ನಿದ್ರೆಯನ್ನು ತರಿಸುತ್ತದೆ. ಇದಕ್ಕೆ ಮೆಸ್ಮರಿನ ನಿದ್ರೆ ಅಥವಾ ಆರೋಗ್ಯವಾದ ನಿದ್ರೆ ಎಂದು ಕರೆಯುತ್ತಾರೆ. ಇಂಥಾ ನಿದ್ರಾವಸ್ಥೆಯಲ್ಲಿ ದೇಹವು ಸರಿಪೂರ್ಣವಾಗಿ ದೇಹವು ವೇದನಾತೀತವಾಗುತ್ತದೆ. ಆವಸ್ಥೆಯನ್ನು ಎಷ್ಟೋ ಡಾಕ್ಟರರು ಕ್ಲೋರೋಫಾರ್ಮನ್ನು ಉಪಯೋಗಿಸದೇ ಶಸ್ತ್ರಕ್ರಿಯೆಯನ್ನು ನಡೆಯಿಸಲು ಉಪಯೋಗಿಸಿಕೊಂಡಿದ್ದಾರೆ. ಇದಲ್ಲದೆ ಒಬ್ಬನಲ್ಲಿ ಇಂಥ ನಿದ್ರೆಯನ್ನು ಬರಿಸಿದಾಗ ಕಾಂತ ಶಕ್ತಿಯ ಪ್ರಭಾವದಿಂದ ಅವನಲ್ಲಿರುವ ಎಲ್ಲಾ ರೋಗಗಳು ನಿರ್ನಾಮವಾಗುವವು. ಮಾನವನ ಕಾಂತಶಕ್ತಿಯ ವಿವರಣೆಯಲ್ಲಿ ಹೇಳಿದಂತೆ–ಎಲ್ಲ ಸೂಚನೆಗಳನ್ನು ಸರಿಯಾಗಿ ಅನುಸರಿಸಿದರೆ ಒಬ್ಬ ವ್ಯಕ್ತಿಯನ್ನು ಮೆಸ್ಮರ್ ವಿಧಾನಕ್ಕೆ ಒಳಪಡಿಸುವದು ಅತ್ಯಂತ ಸುಲಭವಾಗಿದೆ. ಇಂತಹ ಪ್ರಯೋಗದಲ್ಲಿ ಕೆಲವರು ಪ್ರಥಮ ಪ್ರಯೋಗದಲ್ಲಿಯೇ ಯಶಸ್ವಿಯಾಗಬಹುದು. ಮೆಸ್ಮರನ ವಿಧಾನದಲ್ಲಿ ಯಶಸ್ಸನ್ನು ಸಂಪಾದಿಸಿದರೆ ಅವುಗಳ ತತ್ವ ಸರಿಯಾದ ಜ್ಞಾನ ಅವಶ್ಯವಾದರೆ ಇದು ಎಲ್ಲರಿಗೂ ಸಾಧ್ಯವಾದಿತೆಂದು ಹೇಳಲಾಗದು. ಇದರಲ್ಲಿ ಯಶಸ್ಸನ್ನು ಸಂಪಾದಿಸಲು ಎರಡು–ಮೂರು ವಾರಗಳಿಗಿಂತ ಹೆಚ್ಚು ಪ್ರಾಣಾಯಾಮ ಸಾಧನೆ ಅವಶ್ಯ ಬೇಕು, ಕೈಯಿಂದ ಕಾಂತಶಕ್ತಿ ಸ್ಪರ್ಶ ಮತ್ತು ನೆಟ್ಟ ದೃಷ್ಟಿಯ ಪ್ರಯೋಗ ಇವುಗಳನ್ನು ಆಚರಿಸಬೇಕಾಗುವದು ಪ್ರಾಣಾಯಾಮ ಸಾಧನೆಯು ಬಹಳಷ್ಟು ಕಾಂತಶಕ್ತಿಯನ್ನು ಅರಗಿಸಿಕೊಳ್ಳಲು ಸಹಕಾರಿಯಾಗಿದೆ. ಹೀಗೆ ಒಬ್ಬನಲ್ಲಿ ಸಂಗ್ರಹಿತವಾದ ಕಾಂತಶಕ್ತಿಯನ್ನು ಇನ್ನೊಬ್ಬ ವ್ಯಕ್ತಿಯಲ್ಲಿ ಹರಿಯಿಸಲು ಕಾಂತಸ್ಪರ್ಶ ಮತ್ತು ಕಾಂತ ದೃಷ್ಟಿಯನ್ನು ಅವಲಂಬಿಸಬೇಕು. ದಿನಾಲು ಹತ್ತು ನಿಮಿಷಗಳವರೆಗಾದರೂ ಕಾಂತಸ್ಪರ್ಶದ ಪ್ರಯೋಗವನ್ನು ನಡೆಸಬೇಕಾಗುವುದು. ಈ ಹಸ್ತಸ್ಪರ್ಶದ ಪ್ರಯೋಗವು ಯಶಸ್ವಿಯಾಗ ಬೇಕಾದರೆ ಬೆರಳುಗಳನ್ನು ಬಿಡಿಸಿ ಎರಡೂ ಕೈಗಳಿಂದ ಅವುಗಳನ್ನು ರಭಸದಿಂದ ತಿಕ್ಕಬೇಕು ಮತ್ತು ಹಿಂದಕ್ಕೆ ಮುಂದಕ್ಕೆ ಬೀಸಬೇಕು. ಹೀಗೆ ಮಾಡುತ್ತಿರುವಾಗ ಬೆರಳು ತುದಿಗಳ ಮುಖಾಂತರ ಕಾಂತಶಕ್ತಿಯು ಇನ್ನೊಬ್ಬನಲ್ಲಿ ಹರಿದು ಹೋಗುತ್ತದೆ ಎಂದು ಕಲ್ಪಿಸಬೇಕು. ಒಬ್ಬ ಮನುಷ್ಯನನ್ನು ನಿಮ್ಮೆದುರು ಕೂಡಿಸಿಕೊಂಡು ಅವನ ತಲೆಯಿಂದ ಪಾದಗಳವರೆಗೆ ನಿಮ್ಮ ಹಸ್ತವನ್ನು ಸಾವಕಾಶವಾಗಿ ಅವನ ಮೈಮೇಲೆ ಸವರುತ್ತ

ಹೋಗಬೇಕು. ಆ ಬಳಿಕ ಕೈಬೆರಳುಗಳನ್ನು ಒಳಗೆ ಮಡಿಸಿಕೊಂಡು ಪುನಃ ಕೈಗಳನ್ನು ಅವನ ತಲೆಯ ಹತ್ತಿರ ತರಬೇಕು. ಮತ್ತು ಮೊದಲಿನಂತೆ-ಹಸ್ತದಿಂದ ಸವರುವ ವಿಧಾನವನ್ನು ಅನುಸರಿಸಬೇಕು. ಈವಿಧಅಭ್ಯಾಸದ ಸಲುವಾಗಿ ಮೊದಮೊದಲು ಒಂದು ಚಾಪೆ, ಖುರ್ಚಿ, ದಿಂಬು ಇವುಗಳ ಮೇಲೆ ಸವರುವ ವಿಧಾನವನ್ನು ನಡೆಯಿಸಬಹುದು. ಆದರೆ ಈ ವಿಧಾನವನ್ನು ಪ್ರಯೋಗಿಸುವಾಗ ಯಾವ ವ್ಯಕ್ತಿ ಅಥವಾ ವಸ್ತುವಿನ ಮೇಲೆ ಈ ಪ್ರಯೋಗ ಮಾಡುತ್ತಾರೊ ಅವನನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು. ಬೆರಳು ತುದಿಗಳಿಂದ ಅವನಲ್ಲಿ ಕಾಂತಶಕ್ತಿಯು ಹರಿದು ಹೋಗುತ್ತದೆ ಎಂಬ ವಿಚಾರವನ್ನು ದೃಢವಾಗಿ ಮನಸ್ಸಿನಲ್ಲಿ ಇರಬೇಕು. ಇದು ಅತ್ಯಂತ ಮಹತ್ವದ ಅಂಶವಾಗಿರುವುದು.

### ಮೆಸ್ಮರನ ಸಾಮಾನ್ಯ ವಿಧಾನ ರೀತಿ :

ಮೇಲೆ ಹೇಳಿದ ಸೂಚನೆಗಳನ್ನು ಕೆಲವು ದಿನಗಳವರೆಗೆ ಅಭ್ಯಸಿಸಿ ಆಚರಿಸಿದಾಗ ಯಾವನೋ ಒಬ್ಬ ವ್ಯಕ್ತಿಯನ್ನು ಮೆಸ್ಮರ್ ವಿಧಾನಕ್ಕೆ ಒಳಪಡಿಸಲು ಪ್ರಯತ್ನಿಸಬಹುದು. ನಿಮ್ಮ ಮಿತ್ರನನ್ನಾಗಲಿ ಅಥವಾ ಬೇರೆ ಒಬ್ಬ ವ್ಯಕ್ತಿಯನ್ನಾಗಲಿ ಕರೆದು ಅವನಿಗೆ ನಿಮ್ಮ ಕಣ್ಣುಗಳನ್ನು ನೋಡಲು ಹೇಳಿಕೊಳ್ಳಿರಿ. ಅವನು ಹಾಗೆ ನೋಡುತ್ತಿರುವಾಗ ನೀವು ನಿಮ್ಮ ದೃಷ್ಟಿಯನ್ನು ಅವನ ಹುಬ್ಬುಗಳ ನಡುವಿನ ಭಾಗದಲ್ಲಿ ದೃಢವಾಗಿ ನೆಲೆಗೊಳಿಸಿರಿ. ಸುಮಾರು ಐದುನಿಮಿಷಗಳವರೆಗೆ ನೆಟ್ಟ ದೃಷ್ಟಿಯಿಂದ ಹೀಗೆ ನೋಡಿದಾಗ ಅವನನ್ನು ಮೆಸ್ಮರನ ನಿದ್ರೆಯು ಅನುಸರಿಸುವುದು. ಒಂದು ವೇಳೆ ನಿದ್ರೆಯು ಅವನನ್ನು ಆವರಿಸದಿದ್ದರೆ ಕಣ್ಣುಮುಚ್ಚಿಕೊಳ್ಳಲು ಹೇಳಿರಿ. ಅವನ ಕಣ್ಣುಗಳ ಮೇಲಿಂದ ನಿಮ್ಮ ಕೈಗಳಿಂದ ಸವರುತ್ತಾ ಹೋಗಿರಿ. ಆತನಿಗೆ ನಿದ್ರೆ ಬರುವಂತೆ ಅನಿಸಿದರೆ ನಿದ್ರಿಸಿ ಬಿಡು ಎಂದು ಹೇಳಿರಿ.

**ಜೇಮ್ಸ್ ಪದ್ಧತಿ :** (ಮುಂದುವರೆಯುವ ಲೇಖನ.)

### ನಿಸ್ಸೀಮ ಚೆಲುವ

ಹಿಡಿಮುಷ್ಟಿ ಹೃದಯ ಹಿಡಿದಿತ್ತು ವಿಶ್ವ
ನರನಲ್ಲಿ ಮೂಡಿತ್ತು ಅಮರತ್ವ ಭಾಷ್ಯ।
ಹಸಿರ ಉಸಿರಲಿ ಹಬ್ಬಿತೊ ಕಾಶಿ।
ನೀನಿಟ್ಟ ಹೆಜ್ಜೆಯಲಿ ಮೂಡಿತೊ ಕಾಶಿ।
ಸಿದ್ಧ ಬುದ್ಧರ ಜಯಂತಿಯಲಿ ಮೈಮರೆತ ಲೋಕ
ತನ್ನ ನೂಲಿನಲಿ ತಾನೆ ನರಳುವ ತರಣಿಯಂಥ ನರಕ
ಭವಸನ್ನಿಧಿಯ ಭಕ್ತಿಯಾಗಿರೂಪುಗೊಂಡವ

# ಜೋಗುಳಗಳು – (ಲಾಲಿ)

## ಒಂದು ವೈಜ್ಞಾನಿಕ ವಿಶ್ಲೇಷಣೆ

ಹರಿಹರ ಶ್ರೀನಿವಾಸರಾವ್, ಸಹಾಯಕ ಸಂಶೋಧಕರು, ಕೇಂದ್ರಿಯ ಜಲಆಯೋಗ 701,
7ನೇ 'ಎ' ಮುಖ್ಯ ರಸ್ತೆ, ಕಾವೇರಿ ಜಲ ವಿಭಾಗ, 5ನೇ ಬ್ಲಾಕ್, ಜಯನಗರ,
ಬೆಂಗಳೂರು-560 041.

ಜನಪದ ಲೋಕ ಒಂದು ವಿಸ್ಮಯಗಳ ಪ್ರಪಂಚ! ಅನುಭವದ ಜೊತೆಯಲ್ಲಿ ಕೆಲಸ ಕಾರ್ಯಗಳ ಯಾಂತ್ರಿಕತೆ, ಏಕಲೀನತೆಯನ್ನು ಮರೆಯಲು ಹಾಡುಗಳನ್ನು ಹೆಣೆಯುವುದು ಜಾನಪದರ ವೈಶಿಷ್ಟ್ಯ. ಇಲ್ಲಿ ಕ್ರಿಯೆ ಪ್ರಕ್ರಿಯೆಗಳು ಧ್ವನಿಯೊಂದಿಗೆ ಮಿಲನಗೊಂಡು ಸಹಜವಾಗಿಯೇ ಹಾಡುಗಳು ಮೂಡಿ ಮೈವೆತ್ತುತ್ತವೆ. ಮನುಷ್ಯ ಕುಲವು ಪ್ರಾರಂಭವಾಗುವುದೇ ತಾಯಿಯ ಮಡಿಲಿನಿಂದಲ್ಲವೆ? ತನ್ನ ಹೆಣ್ತನವನ್ನು ಸಾರ್ಥಕಗೊಳಿಸಿದ ಮಗುವಿನ ತೊಟ್ಟಿಲಿನ ಹಾಡಾದ 'ಜೋಗುಳ'ಗಳ ಮೂಲಕವೇ ಅನುಭವಗಳನ್ನು ಹಂಚಿಕೊಳ್ಳುತ್ತಾ ಅದನ್ನು ಬೆಳೆಸುವ ಕಾರ್ಯಕ್ಕೆ ಅನುವಾಗುತ್ತಾಳೆ. ಹೀಗೆ ಹೊಂಹೊಮ್ಮಿದ ಜೋಗುಳಗಳಲ್ಲಿ ಅನರ್ಘ್ಯ ವೈಜ್ಞಾನಿಕ ಸತ್ಯವೇ ಅಡಗಿದೆ! ಎಂಬುದನ್ನು ವಿಶ್ಲೇಷಿಸುವುದೇ ಈ ಲೇಖನದ ಉದ್ದೇಶ.

ಮಗುವಿನ ಹುಟ್ಟು ತಿಳಿಯುವುದು ಅದರ ಮೊದಲು ಅಳುವಿನಿಂದಲೇ ಅಚ್ಚರಿಯೆಂದರೆ ಅಳುವಿನ ದನಿಯನ್ನು ಕೇಳಿದ ಮನೆಯವರಿಗೆಲ್ಲ ಸಡಗರ, ಸಂತೋಷ, ತಂದೆಯಂತೂ ಸಿಹಿ ಹಂಚಲು ಎಷ್ಟುಬೇಕಾದರೂ ಖರ್ಚುಮಾಡಿಯಾರು. ಅದೂ ಮೊದಲನೆಯ ಗಂಡು ಮಗುವಾಗಿದ್ದರಂತೂ. ತನ್ನ ಒಡಲನ್ನೇ ಸೀಳಿಬಂದ ನೋವನ್ನು ಈ ಒಂದು ಅಳುವಿನ ಸೆಳಕು ಕ್ಷಣಮಾತ್ರದಲ್ಲಿ ಇಲ್ಲದಾಗಿಸುತ್ತದೆ ತಾಯಿಗೆ. ಆದರ ಅಳುವಿನ ಮೋಹಕತೆಯನ್ನು ತನ್ನ ನುಡಿಗಳಲ್ಲಿ ಪೋಣಿಸಿದ ತಾಯಿಯ ಈ ಜೋಗುಳ ಪದ ಯಾವ ಕವಿಯ ಬಣ್ಣನೆಗೂ ಕಡಿಮೆ ಎನ್ನುವಂತಿಲ್ಲ.

'ಅಳುವಕಂದನ' ತುಟಿಯು ಹವಳದಾ ಕುಡಿಯ್ಹಂಗ
ಕುಡಿಹುಬ್ಬು ಬೇವಿನೆಸಳ್ಹಂಗ। ಕಂಣೋಟ
ಶಿವನ ಕೈಯಲಗು ಹೊಳೆದ್ಹಂಗ॥

ಇಲ್ಲಿ ಉಪಯೋಗಿಸಿರುವ ಬೇವಿನೆಸಳು, ಹವಳ ಆಯುರ್ವೇದ ಪದ್ಧತಿಯಲ್ಲಿ ಉಕ್ತವಾಗಿರುವಂತೆ ಹಲವಾರು ಔಷಧ ಗುಣಗಳನ್ನೊಳಗೊಂಡಿವೆ. ಬೇವಿನ ರೋಗ ನಿರೋಧಕ ಗುಣಗಳನ್ನು ಕಂಡು ಕೊಂಡು ಜಪಾನಿಯರು ಅದನ್ನು ಹೆಚ್ಚು ಹೆಚ್ಚಾಗಿ ಆಮದು ಮಾಡಿಕೊಳ್ಳುತ್ತಿರುವುದರಿಂದ ತಮಿಳು ನಾಡಿನಲ್ಲಿ ಅದು ಬಹುಬೇಗ ಕಾಣೆಯಾಗ ಬಹುದೆಂದು ದಿನಪತ್ರಿಕೆಯ ವರದಿಯೊಂದು ತಿಳಿಸುತ್ತದೆ. ಹುಟ್ಟಿದ

ಹೋಲಿ ಕಳೆವಾಗ, ಮಂಗಳಸ್ನಾನದಲ್ಲಿ ತಾಯಿಗೆ ಅರಿಶಿನ ದೊಂದಿಗೆ ಬೇವನ್ನು ಹಿಂಡಿ ಮಾಡಿ ಹಚ್ಚುವುದುಂಟು. ತೊಟ್ಟಿಲಿಗೆ ಹಾಕುವಶಾಸ್ತ್ರ ಮಾಡುವಾಗ ಅದನ್ನು ಬೇವಿನಿಂದ ಸಿಂಗರಿಸಿರುತ್ತಾರೆ. ಮಕ್ಕಳಿಗೆ ಧಡಾರ ಬಂದಾಗಲೂ ಆದರ ಉಪಯೋಗ ಇದ್ದದ್ದೇ. ಎಳೆಬಿಸಿಲಿನ ಕಿರಣಗಳು ಕುಡಿಬೇವಿನ ಮೇಲೆ ಬಿದ್ದಾಗ ಉಂಟಾಗುವ ಪ್ರತಿ ಫಲವು ಶಿವನ ಕೈಯೊಳಗಿನ ತ್ರಿಶೂಲದ ಅಲಗಿನ ತುದಿಯಿಂದ ಹೊಳೆವ ತೀಕ್ಷ್ಣತೆಯನ್ನು ಮಗುವಿನ ಕಣ್ಣಿನ ನೋಟಕ್ಕೆ ಸಮಾನ ಎಂದು ನಿಖರವಾಗಿ ಹೇಳುವಂತಿದೆ ಈ ಜೋಗುಳ. ಮಗು ಅತ್ತಾಗ ಅದರ ಎಳೆಹುಬ್ಬು ಅಂಕು ಡೊಂಕಾಗಿ ಮುಖದಲ್ಲಿಯ ರಕ್ತ ಚಲನೆ ಹೆಚ್ಚಾದಾಗ ಹವಳದ ಕೆಂಪನ್ನೇ ಹೋಲುತ್ತದೆ ಎನ್ನುವುದು ಅನುಭವ ವೇದ್ಯವೇ ಆಗಿದೆ. ಇಲ್ಲ ಮಗುವಿನ ಬಣ್ಣ ಕನಿಷ್ಟ ಎಣ್ಣೆಗೆಂಪಾಗಿರಬೇಕು.

ತಾಯಿಯ ಎದೆ ಹಾಲು ಅಮೃತ ಸಮಾನ. ಅದಕ್ಕೆ ಸರಿಸಾಟಿಯಾದ ಆಹಾರ ಬೇರೊಂದಿಲ್ಲ ಎನ್ನುವುದನ್ನು ನಮ್ಮ ಹಿರಿಯರು ಶತ ಶತಮಾನಗಳಿಂದಲು ಬಲ್ಲವರು. ಆದೊಂದು ಸಂಪೂರ್ಣ ಆಹಾರವಾಗಿದ್ದು ಎಲ್ಲಾ ವಿಟಾಮಿನ್‌ಗಳ ಆಗರ ವಷ್ಟೆ ಅಲ್ಲದೆ ರೋಗ ನಿರೋಧಕ ಶಕ್ತಿಯನ್ನೂ ಮಗುವಿಗೆ ಉಂಟು ಮಾಡುತ್ತದೆ ಎಂಬುದನ್ನೀಗ ಟಿ.ವಿ. ಜಾಹಿರಾತುಗಳ ಮೂಲಕ ವೈದ್ಯರೇ ಪ್ರತಿ ಪಾದಿಸುತ್ತಿದ್ದಾರೆ ಅಳುವಿನ ಭಾಷೆಯ ಮೂಲಕ ಕಂದನ ಹಸಿವನ್ನು ಅರಿತ ತಾಯಿ ಹಾಲು ಕುಡಿಸುತ್ತಾ ಹೇಳುವ ಈ ಜೋಗುಳ ವೈಜ್ಞಾನಿಕತೆಯನ್ನು ನೋಡಿ.

ಅಳಬ್ಯಾಡ ಅಂದರೆ ಛಲಮಾಡಿ ಅತ್ತಾನೆ
ಹವಳಾದ ಜೊಲ್ಲ ಸುರಿಸ್ಯಾನೆ
ನನ್ನಾಸೆ ಕಂದಯ್ಯ ಹಗಲೆಲ್ಲ ಹಾಲಕುಡಿಸೇನು ಜೋ|| ಜೋ||

ಮಗು ಅಳುವುದಕ್ಕೆ ಹಲವಾರು ಕಾರಣಗಳನ್ನು ಜಾನ್‌ಜೋಲ್ಡಿನ್ ಎಂಬ ವಿಜ್ಞಾನಿ ಕೊಡುತ್ತಾನೆ. ತಾಯಿ ತನ್ನಿಂದ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ದೂರವಾದಾಗ, ತನ್ನ ಬೇಡಿಕೆಗಳನ್ನು ಪೂರೈಸಿಕೊಳ್ಳಲು, ಹೆದರಿಕೆಯಾದಾಗ, ದೈಹಿಕ ತೊಂದರೆಗಳುಂಟಾದಾಗ ಮುಂತಾಗಿ ಈ ಒಂದೊಂದು ಕಾರಣಕ್ಕೂ ಒಂದೊಂದು ರೀತಿಯಲ್ಲಿ ಅಳುವಿನ ಏರಿಳಿತಗಳನ್ನು ಗುರುತಿಸಿದ್ದಾರೆ. ಈ ತ್ರಿಪದಿಯಲ್ಲಿ ಬಂದಿರುವ 'ಛಲ ಮಾಡಿ ಅತ್ತಾನ' ಎಂಬ ಪದ ಪ್ರಯೋಗವು ಪ್ರತಿಭಟನೆಯ ಕುರುಹಾಗಿದೆ. ತನ್ನ ಕರೆಗೆ ಮಾನ್ಯತೆ ಕೊಡದಿರುವ ತಾಯಿ, ಮಗು ರಚ್ಚೆ ಹಿಡಿದು ಉಸಿರು ಕಟ್ಟಿದಂತಾದಾಗ ಸಾಂತ್ವನಗೊಳಿಸಲು ಬರುವಳು. ಆಗ ಅವಳನ್ನು ಕೈಯಿಂದ ಹೊಡೆದು, ಕಚ್ಚಿ ರಾದ್ಧಾಂತ ಮಾಡುತ್ತದೆ. ಹಾಲಿನ ಜೊತೆಗೆ ಜೋಗುಳವನ್ನು ಹಾಡಿದಾಗ ಜೊಲ್ಲು ಸುರಿಸುತ್ತಾ ಅವಳ ಹಾಡಿಗೆ ತನ್ನ ಸೊಲ್ಲನ್ನು ರಾಗವಾಗಿ ಸೇರಿಸುತ್ತ ಹಾಯಾಗಿ ನಿದ್ರೆ ಹೋಗುತ್ತದೆ. ಹಾಲಿಡುವುದರಿಂದ ಮಗುವಿಗೆ ತಾಯಿ



ಮಮತೆಯ ಬಿಸಿಯಪ್ಪುಗೆ ಅದಕ್ಕೆ ಭದ್ರತೆಯ ಸುರಕ್ಷತಾ ಭಾವನೆಯನ್ನುಂಟು ಮಾಡಿದರೆ, ತಾಯಿಯ ಮೊಲೆಗಳ ತೊಟ್ಟಿನ ಭಾಗದಲ್ಲಿರುವ ನರಾಗ್ರಗಳ ಪ್ರಚೋದನೆ ಯಿಂದ ಆಕೆಯ ಮೆದುಳಿಗೆ ಹೆಚ್ಚಿನ ಉತ್ತೇಜನ ಉಂಟಾಗಿ ಅದು ಹೆಚ್ಚು ಹೆಚ್ಚು ಹಾಲನ್ನು ನೀಡಲು ಆ ಭಾಗದ ನರಗಳನ್ನು ಉದ್ದೀಪಿಸುತ್ತದೆ. ಇದು ತಾಯಿಯ ಚಿತ್ತ ಸ್ವಾಸ್ಥ್ಯಕ್ಕೂ ಕಾರಣವಾಗುತ್ತದೆ ಎನ್ನುತ್ತಾರೆ ಬೆಂಗಳೂರಿನ ನಿಮ್‌ಹಾನ್ಸ್ ಸಂಸ್ಥೆಯ ನರರೋಗ ತಜ್ಞರು.

ಮಗುವಿಗೆ ವಾತಾವರಣ ವ್ಯತ್ಯಾಸದಿಂದ ಶರೀರದಲ್ಲಿ ಉಷ್ಣತೆಯು ಏರುಪೇರು ಉಂಟಾಗ ಬಹುದೆಂದು ಅದನ್ನು ನಿವಾರಿಸಲು ಕುಂಚಗಿ, ಕುಲಾಯಿಗಳನ್ನು ಕಟ್ಟುತ್ತಾರೆ. ಇವು ಮಗುವಿನ ಇನ್ನೂ ಸರಿಯಾಗಿ ಬೆಳವಣಿಗೆ ಹೊಂದಿಲ್ಲದ ತಲೆಯ ಭಾಗವಾದ ಅಳನೆತ್ತಿಗೆ ಗಾಳಿಸೋಕದಂತೆ, ಬೆನ್ನು, ಎದೆಭಾಗ, ತೋಳುಗಳನ್ನು ಶೀತದಿಂದ ರಕ್ಷಿಸಲು ಸಹಾಯವಾಗುತ್ತದೆ. ಇಂಥದೊಂದು ಚಿತ್ರಣ ನೀಡುತ್ತದೆ ಈ ಜೋಗುಳ

ಕುಂಚೀಗಿ ಕುಲಾಯಿ ಗೊಂಚಲ ಬಿಡಿ ಮುತ್ತು
ಸಿಂಗಾರಿ ಶ್ರೀ ಕಿರಿಷ್ಣಾಗೆ ಚೆಂದಾಗಿ ಕಟ್ಟಿರಿ ||ಜೋ ಜೋ||

**ಮೆದುಳಿನ ಬೆಳವಣಿಗೆಯಲ್ಲಿ ಜೋಗುಳಗಳ ಪಾತ್ರ.**

ಮಗುವಿನ ಮೆದುಳಿನ ಬೆಳವಣಿಗೆಗೆ ಅತ್ಯಾವಶ್ಯಕ ಅಂಶಗಳು 3.

1. ತಳಿ ರಚನಾಕ್ರಮ 2. ಪೌಷ್ಟಿಕಾಂಶಗಳು 3 ಸಾಮಾಜಿಕ ಪ್ರೇರಣೆ

ತಂದೆ ತಾಯಿಗಳಿಂದ ಬಂದ ಕೊಡುಗೆ ತಳಿ ರಚನಾಕ್ರಮ. ಮೊದಲ ಎರಡು ವರ್ಷಗಳು ಮೆದುಳಿನ ಬೆಳವಣಿಯಲ್ಲಿ ಸೂಕ್ಷ್ಮ ಹಾಗೂ ಸಂಧಿಗ್ಧ ಸಮಯ, ಈ ಕಾಲದ ನಂತರದಲ್ಲಿ ಎಷ್ಟೇ ಪೌಷ್ಟಿಕಾಂಷಗಳನ್ನು ಮಗುವಿಗೆ ನೀಡಿದರೂ ನಂತರ ಹೆಚ್ಚಿನ ಪ್ರಯೋಜನವನ್ನು ಮೆದುಳಿನ ಬೆಳವಣಿಗೆಯಲ್ಲಿ ಕಾಣಲಾಗದು. ಪೌಷ್ಟಿಕಾಂಶಗಳ ಕೊರತೆ ಶಾಶ್ವತ ಬುದ್ಧಿ ಮಾಂದ್ಯಕ್ಕೆ ಹೆದ್ದಾರಿ.

ಸಾಮಾಜಿಕ ಪ್ರೇರಣೆ ಇದು ಮೊದಲು ತಾಯಿಯ ಮೂಲಕವೇ ಒದಗುತ್ತದೆ ಎನ್ನುವುದು ಮಗು ಅಮ್ಮ ಎಂಬ ಶಬ್ದದ ಮೂಲಕ ಲಾಲು ಇನ್ನು ಮುಂತಾದ ಅದರ ತೊದಲ್ನುಡಿಗಳಿಂದ ತಿಳಿದು ಬರುತ್ತದೆ. ಸಾಮಾಜಿಕ ಪ್ರಚೋದನೆ ಇಲ್ಲದಿದ್ದರೆ ಏನಾಗುತ್ತದೆಂಬುದನ್ನು ವಿಜ್ಞಾನಿಗಳು ಸಂಶೋಧಿಸಿ ತಿಳಿಸಿದ್ದಾರೆ.

ಮ್ಯಾರಿಸ್ ವನ್‌ಸೆಡನ್ ಎಂಬ ಜರ್ಮನಿಯ ವಿಜ್ಞಾನಿ 1932 ರಲ್ಲಿಯೇ ಹಸುಮಕ್ಕಳ ಕಣ್ಣಿನ ಪೊರೆ (Catract) ಬಗ್ಗೆ ಅಧ್ಯಯನ ನಡೆಸಿ ಅದರಿಂದ ಬಳಲುತ್ತಿರುವ ಮಕ್ಕಳನ್ನು ಅವರಿಗೆ 10-12 ವರ್ಷಗಳಾದ ನಂತರ ಶಸ್ತ್ರ ಚಿಕಿತ್ಸೆ ನಡೆಸಿ ತೆಗೆದು ಹಾಕಿದ. ಅವರ ದೃಷ್ಟಿಬಲದ ಬಗ್ಗೆ ತಿಳಿಸುತ್ತಾ ಇಂತಹ ಮಕ್ಕಳಲ್ಲಿ

ಬಣ್ಣ ವಿಭೇದ ಗುರ್ತಿಸಲು ಸಾಧ್ಯವಾಯಿತೇ ವಿನಃ ವರ್ಣರಚನೆ ಮತ್ತು ಸಂಯೋಜನೆಯ ಜ್ಞಾನವು ತೃಪ್ತಿಕರವಾಗಿದ್ದಿಲ್ಲ ವೆಂದಿದ್ದಾನೆ ಜ್ಞಾನೇಂದ್ರಿಯುಗಳಲ್ಲುಂಟಾಗುವ ಪರಿಜ್ಞಾನಕ್ಕೆ ಮೆದುಳಿನ ಅತ್ಯಂತ ಮುಖ್ಯ ಭಾಗವಾದ Cerebral Cartexನಲ್ಲಿರುವ ಅತ್ಯಂತ ಸೂಕ್ಷ್ಮ ನರ ಜಾಲಗಳ ಬೆಳವಣಿಗೆಯೇ ಕಾರಣ. ಇವುಗಳಲ್ಲಿ ಹೆಚ್ಚು ಹೆಚ್ಚು ಪಿಸಿಲುಗಳು ಇದ್ದಷ್ಟು ಅವು ಜ್ಞಾನೇಂದ್ರಿಯಗಳ ಸುಪುಷ್ಟ ಬೆಳವಣಿಗೆಗೆ ಕಾರಣವಾಗುತ್ತವೆ, ಇದೂ ಸಹಾ ಮೊದಲ 2-3 ವರ್ಷಗಳ ತನಕವೇ ನಡೆಯುವ ಕ್ರಿಯೆ. ಸ್ಪರ್ಶಾನುಭವ, ದೃಶ್ಯ, ಕೇಳುವ, ರುಚಿ ಹಾಗೂ ವಾಸನೆಗಳ ಅನುಭವ ಈ ಸಮಯದಲ್ಲಿ ಎಷ್ಟು ಯಥೇಚ್ಛವಾಗಿ ದೊರೆಯುತ್ತದೆಯೇ ಅಷ್ಟಷ್ಟು ಒಳ್ಳೆಯ ಪರಿಣಾಮವನ್ನು ಜ್ಞಾನೇಂದ್ರಿಯಗಳ ಮೇಲೆ ಆಗುತ್ತದೆ. ಈ ಸಂದರ್ಭದಲ್ಲಿ ಕಿವಿಯ ಮೇಲೆ ಮೊದಲ ಸುಶ್ರಾವ್ಯ ಧ್ವನಿಯ ಅನುಭವದ ಓ ನಾಮ ತಾಯಿಯ ಜೋಗುಳದಿಂದಲೇ ಎಂಬುದು ಅತ್ಯಂತ ಮುಖ್ಯಕುತೂಹಲವನ್ನುಂಟು ಮಾಡುವ ಅಂಶ.

ರೆಬೆಲ್ ಮತ್ತು ವೆಸೆಲಾ ಎಂಬ ಇಬ್ಬರು ನೊಬೆಲ್ ವಿಜೇತ ವಿಜ್ಞಾನಿಗಳು ಆದೇ ತಾನೆ ಹುಟ್ಟಿದ ಬೆಕ್ಕಿನ ಮೇಲೆ ನಡೆಸಿದ ಪ್ರಯೋಗ ಹೀಗಿದೆ. ಬೆಕ್ಕಿನ ಒಂದು ಕಣ್ಣನ್ನು ಬಟ್ಟೆಯಿಂದ ಮುಚ್ಚಿ ಇನ್ನೊಂದು ಕಣ್ಣನ್ನು ಹಾಗೆಯೇ ನೋಡಲು ಬಿಟ್ಟು ಆರುವಾರಗಳ ನಂತರ ಪರೀಕ್ಷಿಸಿದಾಗ ಯಾವ ಕಣ್ಣನ್ನು ಕಟ್ಟಲಾಗಿತ್ತೋ ಆ ಭಾಗದಲ್ಲಿನ ನರಗಳ ಬೆಳವಣಿಗೆ ಸರಿಯಾಗಿಲ್ಲದ್ದರಿಂದ ಆಕಣ್ಣಿಗೆ ದೃಷ್ಟಿ ಜ್ಞಾನವೇ ಇಲ್ಲದಾಗಿತ್ತು. ಅದೇ ಇನ್ನೊಂದು ಕಣ್ಣಿನ ನರಗಳ ಬೆಳವಣಿಗೆ ಚೆನ್ನಾಗಿದ್ದುದು ಕಂಡು ಬಂದಿತು. ಇದನ್ನು ಆಟೋ ರೇಡಿಯೊ ಗ್ರಾಫಿಯ ಮೂಲಕ ಮೆದುಳಿಗೂ ಮತ್ತು ನ್ಯೂರಾನ್‌ಗಳಿಗೂ ಇರುವ ಸಂಬಂಧವನ್ನು 1972 ರಲ್ಲೇ ಸಿದ್ಧಪಡಿಸಿ ತೋರಿಸಿದ್ದಾರೆ. ಇದು ಮನುಷ್ಯನ ಶರೀರಕ್ಕೂ ಸಹಾ ಅನ್ವಯುವಾಗುತ್ತದೆಂಬುದರ ಬಗ್ಗೆ ಪ್ರಯೋಗಗಳು ನಡೆದಿವೆ.

ಬೇರೆ ಬೇರೆ ಬಣ್ಣಗಳಿಂದ ಮಾಡಿದ್ದ ತೊಟ್ಟಿಲು, ಅದಕ್ಕೆ ಉಪಯೋಗಿಸಲಾಗುವ ಮೆತ್ತನೆವಾಗುಪಟ್ಟ, ಜೋಗುಳದ ಧ್ವನಿ, ತಾಯಿ ಮತ್ತು ಇತರರ ಮೃದು ಸ್ಪರ್ಶ, ಗಿಲಕೆಯನಾದ ಇವು ಮಗುವಿನ ಮೆದುಳಿನ ಪ್ರಚೋದಕ ಕೇಂದ್ರಗಳಿಗೆ ವಾಹಕಗಳಾದ ಪಂಚೇಂದ್ರಿಯಗಳಿಗೆ ಹೆಚ್ಚಿನ ಚೇತನವನ್ನು ಒದಗಿಸುತ್ತವೆ. ಈ ಜೋಗುಳ ಆದಕ್ಕೊಂದು ಉದಾಹರಣೆ.

ಜೋ ಜೋ ಈಶ ಜ್ಯೋತಿ ಪ್ರಕಾಶ
ಚಿನ್ನದ ತೊಟ್ಟಿಲಿಗೆ ರನ್ನದ ದಾರ
ಮಗುಪಟ್ಟೆಯನ್ಹಾಸಿ ಮಲಗಿಸಿ ಶಿಶುವಾ
ಹೆಣ್ಣು ಜಾತಿಗಳೆಲ್ಲ ತೂಗಿತಾ ಬಂದೂ ॥ ಜೋ ಜೋ ॥

- ಮುಂದಿನ ಸಂಚಿಕೆಗೆ -



## 47 ನೇ ಸ್ವಾತಂತ್ರ್ಯ ವರ್ಷ

" ರಾಷ್ಟ್ರೀಯತೆ ಧಾರ್ಮಿಕತೆಗಿಂತ ಶ್ರೇಷ್ಠ, ಈ ಅರ್ಥದಲ್ಲಿ ನಾವು ಮೊಟ್ಟ ಮೊದಲಿಗೆ ಭಾರತೀಯರು, ಅನಂತರ ಹಿಂದುಗಳು, ಮುಸಲ್ಮಾನರು, ಪಾರ್ಸಿಗಳು ಮತ್ತು ಕ್ರಿಶ್ಚಿಯನ್ನರು "

—ಮಹಾತ್ಮ ಗಾಂಧಿ

ನಲವತ್ತಾರು ವರ್ಷಗಳ ಹಿಂದೆ ಇಡೀ ರಾಷ್ಟ್ರವೇ ರಾಷ್ಟ್ರಪಿತನ ಹಿಂದೆ ಒಂದಾಗಿ ನಿಂತು ಭಾರತ ಸ್ವಾತಂತ್ರ್ಯ ಜ್ಯೋತಿಗೆ ನಮಿಸಿತು. ನಮಗೆ ಸ್ವಾತಂತ್ರ್ಯ ಗಳಿಸಿ ಕೊಟ್ಟ ಮಹಾನ್ ತ್ಯಾಗಿಗಳೆಲ್ಲರಿಗೂ ನಾವಿಂದು ಶಿರಬಾಗಿ ವಂದಿಸೋಣ,

" ಮೈಸೂರು ಹುಲಿ" ಟಿಪ್ಪುಸುಲ್ತಾನ್ 1796 ರಲ್ಲಿ ತಾಯ್ನಾಡಿನ ರಕ್ಷಣೆಗಾಗಿ ಹೋರಾಡಿ ಜೀವತೆತ್ತ ದಿನದಿಂದಲೂ ವೀರರಾಣಿ ಕಿತ್ತೂರ ಚೆನ್ನಮ್ಮ 1824 ರಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕರೆಗೊಟ್ಟ ದಿನದಂದು ಹಿಡಿದು. 1942 ರ " ಕ್ವಿಟ್ ಇಂಡಿಯಾ" ಚಳುವಳಿಯವರೆಗೆ ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿತ್ತು,

ಇಂದು ಕರ್ನಾಟಕದ ಮೂಲೆ ಮೂಲೆಯಲ್ಲೂ ಹೊಸತೊಂದು ಬಗೆಯ ಸ್ವಾತಂತ್ರ್ಯದ ಗಾಳಿ ಬೀಸಲಾರಂಭಿಸಿದೆ, ಜನಪ್ರಿಯರೂ ಕ್ರಿಯಾಶೀಲರೂ ಆಗಿರುವ ಮುಖ್ಯಮಂತ್ರಿ ಶ್ರೀ ವೀರಪ್ಪಮೊಯಿಲಿ ಅವರು ಸಾದರಪಡಿಸಿರುವ ಪ್ರಗತಿಶೀಲ ಬದಲಾವಣೆಗಳ ಅಲೆಗಳು ರಾಜ್ಯಾದ್ಯಂತ ಹರಡಿವೆ. ಅಡಳಿತದಲ್ಲಿ ಬೇರೂರಿರುವ ಭ್ರಷ್ಟಾಚಾರ, ಅದಕ್ಷತೆಗಳನ್ನು ತೊಡೆದುಹಾಕಲು ರೂಪುಗೊಂಡಿರುವ ಈ ಹೊಸ ವಿಚಾರಧಾರೆ ಕಾರ್ಯಗತವಾಗುತ್ತಿದೆ, ರಾಜ್ಯವು ಬಡತನ, ಅನಕ್ಷರತೆ, ಹಸಿವು, ಮತಾಂಧತೆ, ಅಸಹಿಷ್ಣುತೆ ಮುಂತಾದ ಪಿಡುಗುಗಳಿಂದ ಮುಕ್ತವಾಗಿ ' ಸ್ವರಾಜ್ಯ' ಪದ ಅರ್ಥಪೂರ್ಣವಾಗಲು ಪ್ರೇರೇಪಿಸುವ ಘಂಟಾರವವೊಂದು ಇದೀಗ ಕರ್ನಾಟಕದ ಮೂಲೆ ಮೂಲೆಯಲ್ಲೂ ಪ್ರತಿಧ್ವನಿಸುತ್ತಿದೆ.

ಜನಮನಕ್ಕೆ ಸ್ಪಂದಿಸುವ ಸ್ವಚ್ಛ ಆಡಳಿತ :.

ಪ್ರಗತಿಪರ ಕಾರ್ಯಕ್ರಮಗಳ ಫಲ ಸಮಾಜದ ಪ್ರತಿ ಹಂತಕ್ಕೂ ತಲುಪುವುದನ್ನು ಖಾತರಿಪಡಿಸಿಕೊಳ್ಳಲು, ಸರ್ಕಾರ ತನ್ನ ಆಡಳಿತ ಯಂತ್ರವನ್ನು ಸಬಲಗೊಳಿಸಿ, ಸಿಬ್ಬಂದಿಗೆ ಅಗತ್ಯವಿರುವ ಅಧಿಕಾರವನ್ನಿತ್ತು, ಅದರ ಪ್ರತಿ ಕಾರ್ಯಾಚರಣೆಗೂ ಹೊಣೆಗಾರಿಕೆ ಹಚ್ಚಿ, ಕಾರ್ಯಸಾಧನೆಯೇ ದಕ್ಷತೆಯನ್ನು ಅಳೆಯುವ ಅಳತೆಗೋಲನ್ನಾಗಿಸುವ ವಿನೂತನ ವ್ಯವಸ್ಥೆ ಇದೀಗ ಜಾರಿಗೆ ಬಂದಿದೆ.

ಎಲ್ಲಾ ಹಂತಗಳಲ್ಲೂ ಭ್ರಷ್ಟಾಚಾರವನ್ನು ತೊಡೆದು ಹಾಕಲೂ ಮುಖ್ಯಮಂತ್ರಿ ಗಳು ಫಣ ತೊಟ್ಟಿದ್ದಾರೆ. 'ಭ್ರಷ್ಟಾಚಾರದ ಹೆಮ್ಮರವನ್ನು ನಾನು ಬುಡಮೇಲು ಮಾಡಿಯೇ ಮಾಡುತ್ತೇನೆ. ನಾನದರಡಿ ಹೂತು ಹೋದರೂ ಚಿಂತೆಯಿಲ್ಲ.'' ಈ ಉದ್ದಿಷ್ಟ ಕಾರ್ಯದಲ್ಲಿ ಸರ್ಕಾರದಲ್ಲಿ ಸರ್ಕಾರ ಲೋಕಾಯುಕ್ತ ಹಾಗೂ ಅದರ ತನಿಖಾ ವಿಭಾಗವನ್ನು ಬಲಗೊಳಿಸಿದೆ. ಸ್ವತ: ಮುಖ್ಯ ಮಂತ್ರಿಗಳೇ ಕಡತಗಳ ತ್ವರಿತ ವಿಲೇ ವಾರಿಯನ್ನು ಸಮೀಕ್ಷಿಸುವುದಲ್ಲದೆ, ಜನರು ಆವರೊಂದಿಗೆ ನೇರವಾಗಿ ಸಂಪರ್ಕಿಸಿ ತಮ್ಮ ಸಮಸ್ಯೆಗಳಿಗೆ ಶೀಘ್ರ ಪರಿಹಾರ ದೊರಕಿಸಿಕೊಳ್ಳುವ ವ್ಯವಸ್ಥೆ ಇದೀಗ ಜಾರಿಗೆ ಬಂದಿದೆ.

**ಆದ್ಯತಾ ಕ್ಷೇತ್ರಗಳು : ಕೈಗಾರಿಕೆ :—**

ಕರ್ನಾಟಕ ಹೊಸ ಕೈಗಾರಿಕಾ ನೀತಿಯಂತೆ 1995 ರ ವೇಳೆಗೆ ರಾಜ್ಯವನ್ನು ದೇಶವಲ್ಲಿ 4 ನೇ ಸ್ಥಾನಕ್ಕೂ, ಈ ಶತಮಾನದ ಅಂತ್ಯದ ವೇಳೆಗೆ ಮೊದಲನೇ ಸ್ಥಾನಕ್ಕೂ ತರಲು ರೂ. 45.000 ಕೋಟಿ ಮೊತ್ತ ಹೂಡಿಕೆಯ ವಿಸ್ತರಣಾ ಕಾರ್ಯಕ್ರಮ ವನ್ನು ಹಮ್ಮಿಕೊಂಡಿದೆ, ಇದರಲ್ಲಿ ಪ್ರಸ್ತುತ ರೂ. 16,000 ಕೋಟಿಗಳಷ್ಟು ಬಂಡ ವಾಳ ಹೂಡಿಕೆಯಾಗುತ್ತಿದೆ. ನಮ್ಮ ದೇಶದ ಹಾಗೂ ಹೊರದೇಶಗಳ ಹೆಸರಾಂತ ಕೈಗಾರಿಕಾ ಘಟಕಗಳಿಗೆ ರಾಜ್ಯದಲ್ಲಿ 'ಕೈಗಾರಿಕಾ ದ್ವಾರ' ವೊಂದು ರೂಪುಗೊಂ ಡಿದೆ.

ರಾಜ್ಯ ವಿಶಿಷ್ಟ ತಂತ್ರಜ್ಞಾನದ ಕೈಗಾರಿಕೆಗಳ ಕೇಂದ್ರವಾಗಿ ರೂಪುಗೊಳ್ಳುತ್ತಿದೆ. ಆರು ಪಟ್ಟಣಗಳಲ್ಲಿ ಕೈಗಾರಿಕೆಯ ಬೆಳವಣಿಗೆಗಾಗಿ ಅವಶ್ಯಕ ಕೈಗಾರಿಕಾ ವಾತಾವರ ಣವನ್ನು, ತಕ್ಕ ಕೈಗಾರಿಕಾ ಪರಿಕರವನ್ನು ಕಲ್ಪಿಸಲು ರೂ. 1250 ಕೋಟಿ ಮೊತ್ತದ ಬಂಡವಾಳ ಹೂಡಿಕೆ ಯೋಜಿಸಲಾಗದೆ.

**ವಿದ್ಯುಚ್ಛಕ್ತಿ :** ರಾಜ್ಯದ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 5100 ಮೆಗ ವಾಟ್‌ಗಳಿಗೆ ಹೆಚ್ಚಿಸಲು ರಾಯಚೂರು ಹೊಸಪೇಟೆ ಮತ್ತು ಮಂಗಳೂರುಗ ಳಲ್ಲಿ ಸ್ಥಾವರಗಳಿಗಾಗಿ ರೂ. 7300ಕೋಟಿ ಇದರಿಂದ 2000 ಮೆಗವಾಟ್‌ಗಳಷ್ಟು ಹೆಚ್ಚುವರಿ ಶಕ್ತಿ ಉತ್ಪಾದನೆ. ಖಾಸಗಿ ವಲಯಗಳಿಂದ ರೂ. 12000 ಕೋಟಿಯ ವಿನಿಯೋಗ ತೀವ್ರ ಪರಿಶೀಲನೆಯಲ್ಲಿದೆ.

**ನೀರಾವರಿ :** ರಾಜ್ಯದಲ್ಲಿ 91000 ಹೆಕ್ಟೇರ್ ಹೆಚ್ಚುವರಿ ಪ್ರದೇಶವನ್ನು ಸಾಗುವ ಳಿಗೆ ತರಲು ರೂ. 12,00ಕೋಟಿಗಳಷ್ಟು ಮೊತ್ತದ ಅನುದಾನ. ನವೆಂಬರ್ 1992 ರಿಂದ ಮೇ 1993 ರ ವರೆಗೆ 37,031 ಹೆಕ್ಟೇರ್ ಪ್ರದೇಶವನ್ನು ಸಾಗುವಳಿಗೊಸಲು ರೂ. 27124 ಕೋಟಿ ವೆಚ್ಚ. ಕೃಷ್ಣಾ ಮೇಲ್ದಂಡೆ ಯೋಜನೆಯ ನಾರಾಯಣ ಪುರ ಬಲದಂಡೆ ನಾಲೆಯ ಕೆಲಸ ಪ್ರಾರಂಭ. ಇದರಿಂದ ರಾಯಚೂರು ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯ. ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ಕ್ರಿ ಶ 2000 ರ ಒಳಗೇ ಬಳಸಲು ನಿರ್ದಿಷ್ಟ ಕ್ರಮ.

ರಾಜ್ಯದ ವಾರ್ಷಿಕ ಯೋಜನಾ ವೆಚ್ಚದ ಶೇಕಡಾ 47ರಷ್ಟು ಭಾಗ ವಿದ್ಯುಚ್ಛಕ್ತಿ ಹಾಗೂ ನೀರಾವರಿ ಯೋಜನೆಗಳಿಗೆ ಮೀಸಲು.

**ವಿದ್ಯಾಭ್ಯಾಸ:** ಕ್ಯಾಪಿಟೇಶನ್ ಶುಲ್ಕ ರದ್ದು. ವೃತ್ತಿಪರ ಶಿಕ್ಷಣ ಕಾಲೇಜುಗಳಲ್ಲಿ ಪ್ರವೇಶಶುಲ್ಕ ರದ್ದು ಮಾಡುವಲ್ಲಿ ಕರ್ನಾಟಕ ದೇಶದಲ್ಲೇ ಮೊದಲು. ದಾಖಲಾತಿ ನಿಯಮ ಹಾಗೂ ಶುಲ್ಕದಬಗ್ಗೆ ಸುಪ್ರೀಮ್ ಕೋರ್ಟ್ ತೀರ್ಪಿನ ಪಾಲನೆ.

**ಸಂಪೂರ್ಣ ಸಾಕ್ಷರತ ಆಂದೋಲನ:** ಬಿಜಾಪುರ, ದಕ್ಷಿಣ ಕನ್ನಡ, ಶಿವಮೊಗ್ಗ, ತುಮಕೂರು ಮತ್ತು ಮಂಡ್ಯ ಈಗಾಗಲೇ ಸಂಪೂರ್ಣ ಸಾಕ್ಷರತೆಯ ಗುರಿಮುಟ್ಟಿದೆ ಇನ್ನೂ 6 ಜಿಲ್ಲೆಗಳ ದಾಪುಗಾಲು. ದಿಸೆಂಬರ್ 1994ರ ವೇಳೆಗೆ ರಾಜ್ಯದಲ್ಲಿ ಸಂಪೂರ್ಣ ಸಾಕ್ಷರತೆ. 'ಬೆಳ್ಳಿಬೆಳಕು' ಹಿಂದುಳಿದ ವರ್ಗದವರಲ್ಲಿ ನಿರಕ್ಷರತೆಯನ್ನು ನಿರ್ಮೂಲಗೊಳಿಸಲು ಕ್ರಮ. ಪ್ರಸಕ್ತ ಸಾಲಿನಲ್ಲಿ ರೂ.134ಲಕ್ಷ ನೀಡಿಕೆ.

**ಕೋಮು ಸೌಹಾರ್ದತೆ :** ರಾಜ್ಯದಲ್ಲಿ ಕೋಮು ಸೌಹಾರ್ದತೆಯ ಪರಂ- ಪರೆಯನ್ನು ಕಾಪಾಡಿಕೊಂಡು ಬರಲು ಕಾರ್ಯಕ್ರಮ. ಕೋಮು ಗಲಭೆಯಲ್ಲಿ ಹಾನಿಗೊಳಡ ಪೂಜಾಸ್ಥಳ ಮತ್ತು ಪ್ರಾರ್ಥನಾ ಮಂದಿರಗಳಿಗೆ ಸರ್ಕಾರದ ವತಿಯಿಂದ ಉಚಿತ ದುರಸ್ತಿ. ಜಾತೀಯತೆ ಹಾಗೂ ಕೋಮುವಾದಿ ಪದ್ಧತಿ ಗಳನ್ನು ಹತ್ತಿಕ್ಕಲು ಕ್ರಮ.

**ಕನ್ನಡ ಜಾಗೃತಿ :** 1993-94ನೇ ಸಾಲನ್ನು ಕನ್ನಡ ಜಾಗೃತಿ ವರ್ಷವನ್ನಾಗಿ ಆಚರಿಸಲಾಗುತ್ತಿದೆ. ರಾಜ್ಯದ ಪ್ರತಿ ವಿಧಾನ ಸಭಾ ಕ್ಷೇತ್ರದಲ್ಲೂ ಒಂದೊಂದು ಕನ್ನಡ ಮಾದರಿ ಶಾಲೆ. ಪಂಚಾಯಿತಿ ಹಂತದಿಂದ ಸರ್ಕಾರದ ಕಾರ್ಯಾಲಯ ದವರೆಗೂ ಆಡಳಿತದಲ್ಲಿ ಕನ್ನಡದ ಬಳಕೆಯನ್ನು ತೀವ್ರಗೊಳಿಸುವುದು. ಕನ್ನಡ ಪುಸ್ತಕಗಳನ್ನು ಜನಪ್ರಿಯಗೊಳಿಸಲು ಜನಾಂದೋಳನ. ಕನ್ನಡ ಪುಸ್ತಕ ಪ್ರಾಧಿಕಾರದ ಸ್ಥಾಪನೆ. ಗಡಿಪ್ರದೇಶಗಳಲ್ಲಿನ ಕನ್ನಡ ಶಾಲೆಗಳಿಗೆ ಸಹಾಯಧನ.

**ಪ್ರಜೆಗಳಿಗೆ ಪ್ರಭುತ್ವ:** ಸಂವಿಧಾನದ 73ನೇ ತಿದ್ದುಪಡಿ ಮಸೂದೆಯನ್ವಯ ದೇಶದಲ್ಲಿ ಮೊಟ್ಟ ಮೊದಲ ಬಾರಿಗೆ ಪಂಚಾಯಿತಿ ರಾಜ್ಯ ವ್ಯವಸ್ಥೆಯನ್ನು ಜಾರಿಗೆ ತಂದಿರುವ ಕೀರ್ತಿ ಕರ್ನಾಟಕಕ್ಕೆ.

ನಮ್ಮ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಬಲಿದಾನ - ಸರ್ವತ್ಯಾಗ ಮಾಡಿದ ಹುತಾತ್ಮರ ಕನಸನ್ನು ನನಸಾಗಿಸಲು ಕರ್ನಾಟಕ ಬದ್ಧ.

**ಕರ್ನಾಟಕ-ಸ್ವರಾಜ್ಯದ ನಿಜ ಅರ್ಥವನ್ನು ಸಾಧಿಸುವ ಯತ್ನದಲ್ಲಿ**

**ಕರ್ನಾಟಕ ವಾರ್ತೆ**

ಸಿದ್ಧಗಂಗಾ

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

ಉಳಿತಾಯವೇ ಅಭಿವೃದ್ಧಿ ! ಅಭಿವೃದ್ಧಿಯೇ ನಿಮ್ಮ ಭವಿಷ್ಯ !

**ತುಮಕೂರು ನಗರದ ಅತ್ಯುತ್ತಮ ಸಹಕಾರಿ ಬ್ಯಾಂಕ್**

**ನಿಮ್ಮ ಸುಭದ್ರ ಭವಿಷ್ಯತೆಗಾಗಿ ನಮ್ಮ ಉಳಿತಾಯ ಯೋಜನೆಗಳಲ್ಲಿ ಭಾಗವಹಿಸಿರಿ.......!**

## ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

**ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-572101.**

**ಅಶೋಕನಗರ ಶಾಖೆ:** ಸರ್ಕಾರಿ ಕಾಲೇಜ್ ಮುಂಭಾಗ ತುಮಕೂರು.

ಎಲ್ಲರಲ್ಲೂ ಉಳಿತಾಯ ಹಾದಿಗಾಗಿ ಸದವಕಾಶವನ್ನು ನಿವೇದಿಸುವುದು.

ನಿಶ್ಚಿತ ಠೇವಣಿ, ಉಳಿತಾಯ ಖಾತೆ, ಕ್ಯುಮುಲೇಟಿವ್ ಡಿಪಾಜಿಟ್ ವರಲಕ್ಷ್ಮಿ ಕ್ಯಾಷ್ ಸರ್ಟಿಫಿಕೇಟ್, ಮಹೇಶ್ವರ ನಿತ್ಯನಿಧಿ (ಪಿಗ್ಮಿ) ಯೋಜನೆ ಸಿದ್ಧಗಂಗಾ ಭವಿಷ್ಯ ನಿಧಿ ಯೋಜನೆ

**ಬ್ಯಾಂಕ್ ಠೇವಣಿದಾರರಿಗೆ ರಕ್ಷಣೆ**

## ಡಿಪಾಜಿಟ್ ಇನ್ಶೂರೆನ್ಸ್ ಕಾರ್ಪೊರೇಷನ್

**ಠೇವಣಿ ವಿಮಾಯೋಜನೆಯ ಪ್ರಕಾರ ಪ್ರತಿಯೊಬ್ಬ ಠೇವಣಿದಾರರ, ರೂ. 30,000-00 ವರೆಗಿನ ಬ್ಯಾಂಕಿನ ಠೇವಣಾತಿಗಳನ್ನು ಡಿಪಾಜಿಟ್ ಇನ್ಶೂರೆನ್ಸ್ ಕಾರ್ಪೊರೇಷನ್ ಸಂಪೂರ್ಣವಾಗಿ ರಕ್ಷಿಸುತ್ತದೆ.**

ನಿಮ್ಮ ಎಲ್ಲಾ ಬ್ಯಾಂಕಿನ ವ್ಯವಹಾರಗಳಿಗೆ ಒಮ್ಮೆ ಭೇಟಿಕೊಡಿ

ಜಿ. ಬಿ. ಪ್ರಸನ್ನಕುಮಾರ್
ಅಧ್ಯಕ್ಷರು

ಕೆ. ಎಸ್. ಮಂಜುನಾಥ್
ಉಪಾಧ್ಯಕ್ಷರು

ಟಿ. ಎಸ್. ಶಿವಪ್ರಕಾಶ್
ಕಾರ್ಯನಿರ್ವಾಹಕರು

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,
ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್ ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ
8597, 2373, 2577






**ಶ್ರೀ ನಂಜುಂಡೇಶ್ವರ ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ ಬೇಕರಿ
ಚಿಕ್ಕಪೇಟೆ ತುಮಕೂರು.।
ದೂರವಾಣಿ : 8077



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ : 2677

**ಸಿ.ವಿ. ಮಹದೇವಯ್ಯ**

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ, ತುಮಕೂರು.।
ದೂರವಾಣಿ : 2077

ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ 572104

"SIDDAGANGA" MONTHLY Reg. No. KRNQ-9